# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೭ ಜುಲೈ, ೧೯೮೫


## ಶ್ರೀ ಸಿದ್ಧಗಂಗಾ ಸುಪ್ರಭಾತ

ರಾಷ್ಟ್ರ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸಿ
ರಾಷ್ಟ್ರಕರ ಜೀವನಕೆ ಗೊತ್ತುಗುರಿ ತೋರಿ।
ಕಷ್ಟದೊಳಗಿದ್ದ ಅದೆಷ್ಟೊ ಲಕ್ಷರ ಪೊರೆದು
ದುಷ್ಟರಿಗೆ ಹಿಡಿಸಿ ಶಿವಸತ್ಯಗಳ ದಾರಿ॥

* * *

ಸಿದ್ಧಗಂಗೆಯು ಜಗದಿ ದಿವ್ಯನಿಧಿಯೆನಿಸುವೊಲು
ಅದ್ಭುತವ ಸಾಧಿಸಿದ ಶ್ರೀ ಶಿವಕುಮಾರ।
ಉದ್ಧರಣೆಗಳ ವಿಭುವು, ತ್ರಿವಿಧ ತಪಗಳ ಪ್ರಭುವು
ವಿದ್ಯಾರ್ಥಿಗಳ ತಂದೆ, ಶಿವತತ್ವ ಸಾರ॥

* * *

ದೊರೆತಿಹನು ನಿನಗರ್ಥ ಶತಮಾನಕೂ ಮಿಕ್ಕಿ
ಪರಮೋಚ್ಚ ಕಾರಣಿಕ-ಬೆಳಕಾಯಿತು।
ತೊರೆ ನಿನ್ನ ನಿದ್ರೆಯನು ಸಿದ್ಧಗಂಗಾ ಶ್ರೀಯೆ
ಇರುಳಳಿದು, ತಮಜಾರಿ ಬೆಳಗಾಯಿತು॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ



# ಶ್ರೀವಾಣಿ

ಸೇವೆಯು ಸೇವೆಗಾಗಿ ಎಂಬ ಉದಾತ್ತ ತತ್ವವನ್ನೊಳಗೊಂಡ ಸೇವಾಕಾರ್ಯಕ್ಕೆ ನಮ್ಮ ಪೂರ್ವಜರು ಪ್ರಾಮುಖ್ಯತೆಯನ್ನು ನೀಡಿದ್ದರು. ನಮ್ಮ ಸಂಸ್ಕೃತಿಯಲ್ಲಿ ಸೇವೆಯು ಹಾಸು ಹೊಕ್ಕಾಗಿ ಬೆಳೆದು ಬಂದಿದೆ. ವೇದ-ಪುರಾಣಗಳು, ಭಗವದ್ಗೀತೆ ಇತ್ಯಾದಿ ಗ್ರಂಥಗಳಲ್ಲಿ ಸೇವೆಯ ಮಹತ್ವವನ್ನು ಉಲ್ಲೇಖಿಸಿದ್ದಾರೆ. ಜನತೆಯಲ್ಲಿ, ವಿಶೇಷವಾಗಿ ನಮ್ಮ ತರುಣ ಜನಾಂಗದಲ್ಲಿ ಈ ತೆರನಾದ ಸೇವಾಮನೋಭಾವ ಮೂಡಿ ಬರಬೇಕು. ತಮ್ಮ ನಾಡು—ನುಡಿಗಳಿಗೆ ಸೇವೆ ಸಲ್ಲಿಸಬೇಕೆಂಬ ಉತ್ಕಟ ಅಭಿಲಾಷೆ, ಅಂಥಹ ಬದುಕಿನಲ್ಲಿ ಶ್ರದ್ಧಾಸಕ್ತಿಗಳು ಅವರಲ್ಲಿ ಉಂಟಾಗಬೇಕಾದ್ದು ಅತ್ಯವಶ್ಯ. ಸುಶಿಕ್ಷಿತ ಯುವಜನರು ತಮ್ಮ ಅಕ್ಕ ಪಕ್ಕದ ಸಮಾಜದಲ್ಲಿನ ಸ್ಥಿತಿಗಳನ್ನು ಗಮನಿಸದೆ ತಮ್ಮ ಜೀವನವನ್ನು ಮಾತ್ರ ರೂಪಿಸಿ ಕೊಳ್ಳುವುದರಲ್ಲಿ ತಲ್ಲೀನರಾಗಿ ಭೋಗಲಾಲಸೆಗಳಿಗೆ ಗಮನವೀಯುವುದರ ಬದಲಾಗಿ ತಮ್ಮ ಸುತ್ತಲ ಬಂಧು-ಭಗಿನೀಯರ ಕಷ್ಟ ಕಾರ್ಪಣ್ಯಗಳನ್ನು ಅರಿತು ಬಗೆಹರಿಸಲೆತ್ನಿಸುವಲ್ಲಿ ಶ್ರಮಿಸುವುದನ್ನು ಕಲಿಯುವುದು ಅಗತ್ಯ. ಇವೆಲ್ಲಕ್ಕೂ ಮಿಗಿಲಾಗಿ ತನುವ ದಂಡಿಸಿ ದುಡಿಯುವ ಒಂದು ಮಹತ್ವಪೂರ್ಣ ಮನಃ ಪ್ರವೃತ್ತಿಯನ್ನು ನಮ್ಮ ಯುವಜನಾಂಗ ಬೆಳೆಸಿಕೊಳ್ಳಲು ಪೋಷಕವಾದ ವಾತಾವರಣ ದೇಶಾದ್ಯಂತ ಎಲ್ಲ ಶಾಲಾ ಕಾಲೇಜುಗಳಲ್ಲಿ ನಿರ್ಮಾಣವಾಗುವುದು ಸ್ವಾಗತಾರ್ಹ. ಇದು ಶಿಕ್ಷಣದ ಒಂದು ಭಾಗವಾಗಿ ಅವರು ಕಲಿಯುವಂತಹ ಏರ್ಪಾಡು ಎಂದಿಗಿಂತಲೂ ಇಂದು ಅವಶ್ಯ. ಸುಶಿಕ್ಷಿತ ತರುಣರು ಸ್ವಯಂ ಸ್ಫೂರ್ತಿಯಿಂದ ಮುಂದೆ ಬಂದು ರಾಷ್ಟ್ರದ ಏಳ್ಗೆಗಾಗಿ ತಮ್ಮನ್ನೇ ಸಮರ್ಪಿಸಿಕೊಳ್ಳುವಂತಹ ಪ್ರೇರಣೆ ಅವರಿಗೆ ದೊರಕುವಂತಾಗಬೇಕು. ಈ ದಿಶೆಯಲ್ಲಿನ ಯಾವುದೇ ವ್ಯವಸ್ಥೆಯು ಸರ್ವರ ಮೆಚ್ಚುಗೆಗೆ ಪಾತ್ರವಾಗುವುದರಲ್ಲಿ ಸಂಶಯವಿಲ್ಲ.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಪಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡ ಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜ ನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗ ತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶ ವಿಲ್ಲ. ಅನುವಾದ, ರೂಪಾಂತರ ಲೇಖನ ಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರ ರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ...ಳೆಯ ವಿದ್ಯಾರ್ಥಿಗಳ ಸಂಘಕ್ಕೆ 'ಶಾಶ್ವತ' ಸದಸ್ಯತ್ವ ಪಡೆದಿರುವವರು

...ರ್ಣಶ್ರೀ :—

...9 ಡಾ|| ಪಿ. ಎಸ್. ರೇಣುಕಾರಾಧ್ಯ, ಬೆಂಗಳೂರು.

...0 ಅಡವೀಶರ್ಮ, ಮಂಜುನಾಥ ನಗರ, ಬೆಂಗಳೂರು–560010.

...1 ವೀರಪ್ಪದೇವರು, ಪ್ರಿಯದರ್ಶಿನಿ ಆಪ್ಟಿಕಲ್ಸ್, ಬೆಂಗಳೂರು–56001.

...2 ಬಿ. ಎಂ. ಈಶ್ವರಯ್ಯ, ಡಿ.ಎಂ.ಇ., ಚಾಮರಾಜಪೇಟೆ, ಬೆಂಗಳೂರು–560018.

...3 ಎನ್. ವಿ. ರೇವಣ್ಣ, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10.

...4 ಬಿ. ವಿ. ಮಹದೇವಯ್ಯ, ವಿಜಯನಗರ, ಬೆಂಗಳೂರು–40.

...5 ಎಂ. ಬಿ. ಶಿವನಂಜೇಗೌಡ, ಕೆ. ಮತ್ತಿಘಟ್ಟ, ಗುಬ್ಬಿ ತಾಲ್ಲೂಕು.

...6 ಎಂ. ಜಡೇಸ್ವಾಮಿ, ಗುಂಡೇಗಾಲ್, ಕೊಳ್ಳೆಗಾಲ ತಾಲ್ಲೋಕು.

...7 ಬಸವರಾಜು, ಬಸವಾಪಟ್ಟಣ, ತುಮಕೂರು ತಾಲ್ಲೂಕು.

...8 ಬಿ. ಎನ್. ಉಮೇಶ್, ಗಾಂಧಿ ನಗರ, ಬೆಂಗಳೂರು–560009.

...9 ಎಂ. ಬಿ. ಶಿವಕುಮಾರ್, ಬನಶಂಕರಿ, ಬೆಂಗಳೂರು–560004.

...10 ಹೆಚ್. ಬಸವಯ್ಯ, ಸೊಣ್ಣೇನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು.

...11 ಎ. ವೆಂಕಣ್ಣ, ನಗರ್ತಪೇಟೆ, ಚಿಕ್ಕಬಳ್ಳಾಪುರ.

...12 ಟಿ. ಬಿ. ನರಸಿಂಹಯ್ಯ, ಹೂವಿನ ವ್ಯಾಪಾರಿಗಳು, ತುಮಕೂರು.

...13 ನಿಜಗಲ್ಲಯ್ಯ, ದೂರವಾಣಿ ನಗರ, ಬೆಂಗಳೂರು–560076.

(ಮುಂದುವರಿಯುತ್ತದೆ)

# ಸಂಪಾದಕೀಯ

## ಆಂತರಿಕ ಶಿಸ್ತು

ಒಬ್ಬ ವ್ಯಕ್ತಿ, ಒಂದು ಕುಟುಂಬ, ಒಂದು ಗ್ರಾಮ, ಒಂದು ಸಂಸ್ಥೆ, ಒಂದು ಸಂಘ, ಒಂದು ರಾಷ್ಟ್ರದ ಅಭಿವೃದ್ಧಿ— ಅದು ಅವಲಂಬಿಸುವ, ಅನುಸರಿಸುವ, ಪರಿಪಾಲಿಸುವ ಶಿಸ್ತಿನ ಮೇಲೆ ನಿಂತಿರುತ್ತದೆ. ಶಿಸ್ತು— ಸೌಂದರ್ಯದ, ಸಂಸ್ಕಾರದ, ಸಂಸ್ಕೃತಿಯ ಮುಖ್ಯ ಲಕ್ಷಣ. ಅದು ಮಾತಿನಲ್ಲಿ, ಕೃತಿಯಲ್ಲಿ, ಒಟ್ಟು ಬದುಕಿನಲ್ಲಿ ವ್ಯಕ್ತವಾಗುವಂಥದು.

ಆದರೆ– ಇಂದು ಏನಾಗಿದೆ? ಏನಾಗುತ್ತಿದೆ? ಶಿಸ್ತು ಯಾವ ಕ್ಷೇತ್ರದಲ್ಲಿ, ಜೀವನದ ಯಾವ ರಂಗದಲ್ಲಿ ಕಾಣಬರುತ್ತಿದೆ? ಅಧ್ಯಾಪಕ–ವಿದ್ಯಾರ್ಥಿಯ ಮಧ್ಯದಲ್ಲಿದೆಯೇ? ಶಾಸಕ ಪ್ರಜೆಗಳಲ್ಲಿದೆಯೇ? ಆಡಳಿತಾಧಿಕಾರಿ–ಸಿಬ್ಬಂದಿ ವರ್ಗದಲ್ಲಿದೆಯೇ? ಸರ್ಕಾರದ ರಥ ನಡೆಸುವವರಲ್ಲಿದೆಯೇ? ಎಲ್ಲಿದೆ? ಎಲ್ಲೆಲ್ಲೂ ಅಶಿಸ್ತು, ಅಶಾಂತಿ. ಕಾರಣವೇನು? ಎಲ್ಲರೂ ತಾವು ಸ್ವತಂತ್ರರೆಂಬ ಕಲ್ಪನೆ. ತಾವು ಹೇಳಿದ್ದು, ಕೇಳಿದ್ದು ನಡೆಯಲೇಬೇಕೆಂಬ ಮೊಂಡುವಾದ. ಪರಿಣಾಮ, ವ್ಯಕ್ತಿಯ ಜೀವನದಲ್ಲಿ ಗೊಂದಲ, ಕೌಟುಂಬಿಕ ಬದುಕಿನಲ್ಲಿ ವಿಷಮತೆ, ಗ್ರಾಮಜೀವನದ ನೈರಾಶ್ಯ, ಸಂಸ್ಥೆಯ ಅಭಿವೃದ್ಧಿಗೆ ಅಡ್ಡಗಾಲು, ರಾಷ್ಟ್ರಭವಿಷ್ಯಕ್ಕೆ ಕತ್ತಲೆ.

ಪಂಜಾಬ್ ಸಮಸ್ಯೆಯಾಗಲಿ, ತೆಲಗು ಗಂಗಾ ಯೋಜನೆಯಾಗಲಿ, ಕುದುರೆ ಮೋತಿ ಪ್ರಕರಣವಾಗಲಿ, ತಾಂತ್ರಿಕ ಕಾಲೇಜುಗಳ ಪ್ರವೇಶ ವಿಚಾರವಾಗಲಿ, ವೇತನದ ಮಾತಾಗಲಿ, ಉದ್ಯೋಗ ಸಮಸ್ಯೆಯಾಗಲಿ, ಬಡ್ತಿವಿಷಯವಾಗಲಿ, ಆಂತರಿಕ ಶಿಸ್ತು ಇಲ್ಲದಿರುವುದೇ ಕಾರಣವೆನಿಸುವುದಿಲ್ಲವೆ?

ಅಲ್ಲದೆ, ಹಕ್ಕುಗಳಿಗೆ ನಡೆದಿರುವ ಮುಷ್ಕರ, ಮೀಸಲಾತಿಯ ಪರ, ವಿರೋಧವಾದ ಚಳುವಳಿಗಳು ದೂರದೃಷ್ಟಿಯ ಅಭಾವದ ದ್ಯೋತಕಗಳಲ್ಲವೆ? ಸಾರ್ವಜನಿಕ ಜೀವನದ ನಿತ್ಯ ವ್ಯವಹಾರಗಳಲ್ಲಿ ಆಂತರಿಕ ಶಿಸ್ತು ಕಾಣುತ್ತಿದೆಯೆ? ಕರ್ತವ್ಯ ನಿರತರಾಗುವಲ್ಲಿ ಆಸಕ್ತಿ ಎಲ್ಲಿದೆ? ಸಚಿವರಲ್ಲಿ, ಸಚಿವಸಂಪುಟಗಳಲ್ಲಿ ಅದರ ಮಾತೇ ಇಲ್ಲವಾಗುತ್ತಿದೆ. ವ್ಯಕ್ತಿಗಿಂತ ಸಂಸ್ಥೆ, ನಾಡು ಮುಖ್ಯವೆಂಬುದು ಏಕೆ ಮನಗರ್ಥವಾಗುತ್ತಿಲ್ಲ? ಪಡೆಯುತ್ತಿರುವ ಶಿಕ್ಷಣದ ಪ್ರಭಾವವೇ? ಆಳುತ್ತಿರುವವರ, ಹಿರಿಯರ, ಸಮಾಜದ ಮುಖಂಡರ ನಿತ್ಯ ಚಟುವಟಿಕೆಗಳು ಕಾರಣವೆ? ಮುಂದಿನ ಜನಾಂಗ ಸುಸಂಸ್ಕೃತ ಜನಾಂಗವಾಗಬೇಕೆಂದು ಆಶಿಸುವವರೆಲ್ಲ ಇತ್ತ ಯೋಚಿಸಿದರೆ ಎಷ್ಟು ಒಳ್ಳೆಯದು? ಬೇವು ಬಿತ್ತಿ ಮಾವು ಬಯಸುವುದು ಬೇಡ. ಆಂತರಿಕ ಶಿಸ್ತು ಮೂಲದ್ರವ್ಯವಾಗಿ, ಧಾತುವಾಗಿ, ಬರಲಿ ಎಂದು ಎಲ್ಲರೂ ಹಾರೈಸೋಣ. ●

ಾವು :— —ಟಿ. ಆರ್. ಮಹಾದೇವಯ್ಯ

ಹುಟ್ಟಿದ ಜೀವಿ ಸಾವನ್ನು ಬೆನ್ನಿಗೆ ಕಟ್ಟಿಕೊಂಡೇ ಬರುತ್ತಾನೆ. ಜನನ-ರಣ ಹಗಲು-ರಾತ್ರಿಗಳಂತೆ ಒಂದೇ ನಾಣ್ಯದ ಎರಡು ಮುಖಗಳಾಗಿವೆ. ಜೀವಿಸಿವವನು ಒಂದು ದಿನ ಸಾಯಲೇಬೇಕು ಆದರೆ ಹುಟ್ಟಿದಾಗ ಇದ್ದ ಸಡಗರಸಂಭ್ರಮ ಸಾವಿನಲ್ಲಿರುವುದಿಲ್ಲ, ಸಾವನ್ನು ಹಾರ್ದಿಕವಾಗಿ ಸ್ವಾಗತಿಸುವವರು ಎಷ್ಟುಂದಿ? ಬದುಕಿನಲ್ಲಿ ಜಿಗುಪ್ಸೆ ಹೊಂದಿ ಆತ್ಮಹತ್ಯೆ ಮಾಡಿಕೊಳ್ಳುವ ಪಲಾಯನಾದಿಗಳನ್ನು ಬಿಟ್ಟರೆ ಉಳಿದ ಯಾರೂ ಸಾವನ್ನು ಸ್ವಾಗತಿಸರು. ಬದಲು ಸಾವುತಸಿದ್ಧವೆಂದು ಗೊತ್ತಿದ್ದರೂ, ತಾನೂ ಶಾಶ್ವತನೇ ಎಂಬ ಭ್ರಮೆ ಯಾರನ್ನೂ ಬಿಡುದಿಲ್ಲ. ದಿನವೂ ತನ್ನ ಸುತ್ತ ಮುತ್ತ ವಾಸಿಸುವರಲ್ಲಿ ಒಬ್ಬೊಬ್ಬರೇ ಸಾಯುದನ್ನು ಕಣ್ಣಾರೆ ಕಾಣುತ್ತಿದ್ದರೂ ಉಳಿದವರು ತಮ್ಮ ಉಳಿವಿನ ಬಗ್ಗೆ ವಿಶ್ವಾಸವಿಟ್ಟುಂಡೇ ಇರುತ್ತಾರೆ. ಅದಕ್ಕೆ ನಯಸೇನ ಕವಿ ಹೀಗೆ ಅಚ್ಚರಿಪಟ್ಟದ್ದು:

ಸಾವವರಂ ಕಂಡಿರ್ದುಂ
ಸಾವೆಯ್ದಿದ ನರರನೊಯ್ದು ಸುಟ್ಟುಂ ಮತ್ತಂ
ಸಾವೆನಗಿಲ್ಲೆಂದಿರ್ಪನೆ
ಗಾವಿಲನಾರಯ್ದು ನೋಡುವಂಮರ್ಚರೆಯೊಳ್।

ರ್ಮರಾಜನಿಗೆ ಹಾಕಿದ ಯಕ್ಷ ಪ್ರಶ್ನೆಗಳಲ್ಲಿ ಒಂದು: "ಜಗತ್ತಿನಲ್ಲಿ ಅತ್ಯಂತ ಆಶ್ಚರ್ಯರವಾದ ಸಂಗತಿ ಯಾವುದು?" ಅದಕ್ಕೆ ಧರ್ಮರಾಯನ ಉತ್ತರ: ಮನುಷ್ಯ ದಿನವೂ ಜೀವಿಗಳು ಅಳಿಯುವುದನ್ನು ಕಣ್ಣಾರೆ ನೋಡುತ್ತಾ ಇದ್ದರೂನು ಬದುಕುವ ಹಂಬಲ ಹೊಂದಿದ್ದಾನಲ್ಲಾ, ಇದು ಜಗದಾಶ್ಚರ್ಯಗಳಲ್ಲಿ ಒಂದು"

"ನಾವು ಅನಿವಾರ್ಯವಾದ ಸಾವಿಗೆ ಹೆದರ ಬೇಕಾಗಿಲ್ಲ. ಎಷ್ಟೇ ಜತನದಿಂದದ್ದರೂ ಈ ದೇಹ ಒಂದಲ್ಲ ಒಂದು ದಿನ ಮಸಣದೆಡೆ ಸಾಗಲೇಬೇಕು. ಆಯುಷ್ಯರಿದಾಗ ಮರಣ ಶತಸಿದ್ಧ; 'ಜಾತಸ್ಯ ಮರಣಂ ಧ್ರುವಂ' ; ಸಾವಿಲ್ಲದ ಮನೆ ಇಲ್ಲ;ಂತಕನ ದೂತರಿಗೆ ಕಿಂಚಿತ್ತೂ ದಯವಿಲ್ಲ, ಅಲ್ಲವೆ?" ಎಂದು ಪುರಣವನ್ನು ಗೆದ್ದಹಂತರು ನಮಗೆ ತಿಳಿಹೇಳಿದ್ದಾರೆ. ಹುಟ್ಟು ಸಾವಿನ ಚಕ್ರದಲ್ಲಿ ನಾವಿರುವಾಗಂದಾದ ಮೇಲೆ ಇನ್ನೊಂದು ಇದ್ದೇ ಇರುತ್ತದೆ. ಭಗವಂತನು ನಮ್ಮಲ್ಲಿ ನೆಲೆಸಿದೇಲೆ ಸಾಯುವುದೂ ಕೂಡ ಸುಖವೇ ಎಂದು ಒಬ್ಬ ಶತಕಕಾರ ಹೀಗೆ ಸ್ವಾಂತನಳಿಸಿದ್ದಾನೆ:

ಸಾವಿಗಂಜಲದೇಕೆ ಸಾವು ಪೆರತೇ ಮೈದಾಳ್ದಿದರ್ಗಂಜಲಾ
ಸಾವೇಂ ಮಾಣ್ಗುಮೆ ಕಾವರುಂಟೆಯುಕಟಾ ಆ ಜೀವನೆಂದುಮೇಂ
ಸಾವಂ ಕಂಡವನಲ್ಲವೆ ಮರಣವಾಗಲ್ಮುಂದದೇಂ ಪುಟ್ಟನೇ
ನೀವೆನ್ನೊಳಿಲ್ದೆ ಸಾವುದುಂ ಸುಖವಲೆ ರತ್ನಾಕರಾಧೀಶ್ವರಾ.

ಇದಲ್ಲದೆ ಸಾವಿನಲ್ಲಿ ಹಲವು ಬಗೆಗಳಿವೆ. ಕೆಲವರು ಜೀವ ಹೋಗಿ, ದೇಹ ಬಿದ್ದು ಕಣ್ಮರೆಯಾಗುತ್ತಾರೆ, ನಿಜ. ಆದರೆ ಅವರ ನೆನಪು ಮಾಸುವುದಿಲ್ಲ. ಅವರ ಸಾರ್ಥಕ ಬದುಕಿನ ಬೆಳಕಿನ ಹೆಜ್ಜೆಗಳು ಶತಮಾನಗಳುರುಳಿದರೂ ಉಳಿದವರಿಗೆ ದಾರಿದೀಪವಾಗಿರುತ್ತವೆ. ಅವರು ಒಂದು ರೀತಿಯಲ್ಲಿ ಸತ್ತೂ ಬದುಕಿರುತ್ತಾರೆ. ಜನಮನದಲ್ಲಿ ನೆಲೆಗೊಂಡಿರುತ್ತಾರೆ. ದೊಡ್ಡವರ ಬದುಕು ಇಂಥದ್ದು. ಅವರು ಬೇಂದ್ರೆಯವರು ಹೇಳಿರುವಂತೆ,

"ಸರಸ ಜನನ
ವಿರಸ ಮರಣ

ಸಮರಸವೇ ಜೀವನ'' ಎಂದು ಬದುಕಿದವರು.

ಸುಖ-ದುಃಖಗಳ ಸಮಪಾಕವಿರುವ ಸಾಮರಸ್ಯದ ಬದುಕೇ ನಿಜವಾದ ಬದುಕು. ಹಾಗೆ ಬಾಳಿದವನು ಸಾವಿಗೆ ಎಂದೆಂದೂ ಬೆದರುವುದಿಲ್ಲ. "ಮರಣವೇ ಮಹಾನವಮಿ" ಎಂಬ ಧೀರತನ ಅವನದು.

ವೀರರಿಗೆ ಸಾವು ಬರುವುದು ಒಮ್ಮೆಯೆ. ಆದರೆ ಹೇಡಿಗಳಿಗೆ, ಪಲಾಯನ ವಾದಿಗಳಿಗೆ ಸಾವು ಅನೇಕ ಸಲ ಬರುತ್ತದೆ. ಏಕೆಂದರೆ ಬದುಕಿನ ಅನೇಕ ಅಪೂರ್ವ ಕ್ಷಣಗಳಲ್ಲಿ ಅವರು ಸತ್ತಂತೆಯೇ ಇರುತ್ತಾರೆ. ಉಸಿರಾಟವೊಂದೇ ಅವರು ಜೀವಿಸಿರು ವುದಕ್ಕೆ ಸಾಕ್ಷಿ. ಇವರನ್ನು ಜೀವಚ್ಛವಗಳೆನ್ನುತ್ತಾರೆ. ಹೀಗೆ ಬದುಕಿಯೂ ಸತ್ತಂತೆ ಇರುವುದಕ್ಕಿಂತ ದೊಡ್ಡವರಂತೆ ಸತ್ತು ಬದುಕಿರುವುದು ಲೇಸಲ್ಲವೇ?

ಮತ್ತೆ ಕೆಲವರಿರುತ್ತಾರೆ, ಅವರು ಸಾವು ಬರುವುದೆಂಬ ಅರಿವು ಇರುವವರೇ. ಆದರೆ ಮುಂದಿನ ಜನ್ಮದ ಬಗ್ಗೆ ಹೆಚ್ಚು ಯೋಚನೆಗೀಡಾದವರು. ಧ್ಯಾನ, ವ್ರತ ಗಳಿಂದ; ದಾನ ಧರ್ಮಗಳಿಂದ ಕಾಣದ ಊರಲ್ಲಿ ಕೈಹಿಡಿದು ನಡೆಸುವಾತನ ಒಲವ ಗೆಲ್ಲುವ ತವಕದವರು. ಇವರ ಇಂಥ ಕಾಳಜಿ ಎಷ್ಟು ಅತಿಯಾಗಿಬಿಡುತ್ತದೆಂದರೆ ಸಾಯುವ ಮುಂಚೆಯೇ ಪರದ ಚಿಂತೆಯಲ್ಲಿ ಸತ್ತವರಂತಿರುತ್ತಾರೆ. ಪರಲೋಕದ ಚಿಂತೆ ಯಲ್ಲಿ ಇಹದ ಬಾಳನ್ನು ಬೀಳಾಗಿಸಿಕೊಳ್ಳುತ್ತಾರೆ. ಸಾಯುವ ಮುಂಚೆಯೇ ಸತ್ತಂತಿ ದ್ದರೆ ಏನು ಪ್ರಯೋಜನ? ಅದಕ್ಕೆ ಅಂಥವರನ್ನು ಎಚ್ಚರಿಸುತ್ತಾ ನಮ್ಮ ಹಿರಿಯರು ಹೇಳಿದರು, 'ಸತ್ತು ಕಾಣ್ಬ ಸಗ್ಗಕ್ಕಿಂತ ಇದ್ದು ಕಾಣ್ಬ ನರಕಲೇಸು' ಎಂದು.

ಬದುಕನ್ನು ಸರಿಯಾಗಿ ಅರ್ಥಮಾಡಿಕೊಂಡ ಮನುಷ್ಯ, ಜೀವಿಗೆ ಅನಿವಾರ್ಯ ವಾದ ಹುಟ್ಟು ಸಾವುಗಳ ಗೊಡವೆಯನ್ನೇ ತಲೆಗೆ ಹಚ್ಚಿಕೊಳ್ಳುವುದಿಲ್ಲ. ಪಾಲಿಗೆ ಬಂದುದನ್ನು ಪ್ರಸನ್ನಗೊಳಿಸುವಲ್ಲಿ, ಸಾರ್ಥಕಪಡಿಸಿಕೊಳ್ಳುವಲ್ಲಿ ಶ್ರಮಿಸುತ್ತಾ, ನಗು ನಗುತ್ತಾ ಎಲ್ಲವನ್ನು ಸ್ವಾಗತಿಸುತ್ತಾನೆ. ಇವನು ನಿಜವನರಿತ ನಿಶ್ಚಿಂತ, ಮರಣವ ಗೆಲುವ ಮಹಂತ; ಹುಟ್ಟು-ಸಾವುಗಳಲ್ಲಿ ವ್ಯತ್ಯಾಸ ಕಾಣದ ಸ್ಥಿತಪ್ರಜ್ಞ. ಈ ರೀತಿ ಯಲ್ಲಿ ಮನಸ್ಸು ಮಾಗುವಂತೆ, ನಾವು ಬದುಕಲು ಕಲಿಯಬೇಕು.

## ಸವ ಪ್ರತಿಜ್ಞಾ :—

—ಟಿ. ಎಸ್. ಮಹಾದೇವಯ್ಯ.

"ಎಂಭತ್ತು ನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿ ನೋಡೆನ್ನನು.
ೇಡಿ ನೋಡೆನ್ನನು. ಬೇಡದಿದ್ದರೆ, ಅಯ್ಯ ನಿಮಗೆ ಪ್ರಮಥರಾಣೆ. ನೀನಾವ ಮುಖದಲ್ಲಿ
ಂದು ಬೇಡಿದೊಡೀವೆನು ಕೂಡಲ ಸಂಗಮ ದೇವಾ."

ಪರಮಾತ್ಮನು ವಿಶ್ವವ್ಯಾಪಕನು. ಎಲ್ಲ ಜೀವ ರಾಶಿಗಳಲ್ಲಿ ಅವನ ಸೂಕ್ಷ್ಮ
ರವೇ ಅಡಗಿಕೊಂಡಿದೆ. ಅಣುವಿನಲ್ಲಿ ಅಣುವಾಗಿ, ಮಹತ್ತಿನಲ್ಲಿ ಮಹತ್ತಾಗಿ
ೀವನು ಜಗತ್ತಿನಲ್ಲಿ ತುಂಬಿಕೊಂಡಿರುವನು. ಇದನ್ನೆ ಭಗವಾನ್ ರಾಮಕೃಷ ಪರಮ
ಂಸರು ತಮ್ಮ ಅನುಭವದ ಮಾತುಗಳಿಂದ ಇಂತು ವರ್ಣಿಸಿರುವರು. "ನಾನೀಗ
ನು ನೋಡುತ್ತಿರುವೆನೆಂಬುದನ್ನು ಬಲ್ಲಿರಾ! ಎಲ್ಲೆಲ್ಲಿಯೂ ಅವನನ್ನು! ಮನುಷ್ಯ
ೂದಲುಗೊಂಡು ಪ್ರಾಣಿ ಮಾತ್ರರಲ್ಲಿ ತೊಗಲಿನ ಹೊದಿಕೆಗಳನ್ನು ಹೊದ್ದು ಕೊಂಡು
ಳಗೆ ತಾನಿದ್ದುಕೊಂಡು ಆತನು ತಲೆಯಾಡಿಸುತ್ತಲೂ, ಕೈ ಕಾಲುಗಳನ್ನಲ್ಲಾಡಿಸು
ಲೂ, ಇರುವುದನ್ನು ನಾನು ಪ್ರತ್ಯಕ್ಷ ನೋಡುತ್ತಿರುವೆನು." ಜಗತ್ತೆಲ್ಲಾ ಪರ
ಾತ್ಮ. ವಿಶ್ವವೆಲ್ಲಾ ದೇವರು. ಆದಕ್ಕಾಗಿಯೇ ಯೇಸುಕ್ರಿಸ್ತನು ...."Heaven
or it is Gods throne....the Earth for it is his foot stone.
ರ್ಗವು ದೇವನ ಸಿಂಹಾಸನ. ಭೂಮಿಯು ಅವನ ಕಾಲುಮಣೆ ಅಂತಿರುವನು.
ಕ್ತನ ಭಕ್ತಿಯು ಹೆಪ್ಪುಗಟ್ಟಿದಂತೆಲ್ಲಾ ಪರಮಾತ್ಮನಲ್ಲಿ ತನಗಿರುವ ಆನಂದ ಪ್ರವಾ
ವು ಹೃದಯದಿಂದ ಉಕ್ಕುವುದು. ಆ ಸ್ಥಿತಿಯಲ್ಲಿ ಎಲ್ಲ ಜೀವಗಳಲ್ಲಿ ಪರಮಾತ್ಮನ
ರ್ಶನ ವಾಗುವುದು. ಇದನ್ನೆ ಮಹಾದೇವಿಯಕ್ಕನವರು ಇಂತು ನುಡಿದಿರುವರು.
ವನವೆಲ್ಲ ನೀವೆ ವನದೊಳಗಣ ದೇವ ತರುವೆಲ್ಲ ನೀವೆ. ತರುವಿನೊಳಗಾಡುವ ಖಗ
ೃಗವೆಲ್ಲ ನೀವೆ ಚನ್ನ ಮಲ್ಲಿಕಾರ್ಜುನ ಸರ್ವ ಭರಿತ ನಾಗಿ ಎನಗೇಕೆ ಮುಖದೋರ"!
ಭಾವನೆಯನ್ನು ಬಸವೇಶ್ವರನು ಅನುಭವಿಸಿ ನುಡಿದ ನುಡಿಗಳಿವು.

ವಿಶ್ವ ಪ್ರೇಮವು ಮನುಷ್ಯನಿಗೆ ಅತ್ಯಾವಶ್ಯಕ. ಜಗತ್ಕಲ್ಯಾಣಕ್ಕಾಗಿ ವಿಶ್ವ
ಾಟುಂಬಿಕ ಜೀವನವು ಬೇಕು. ಪರಮಾತ್ಮನು ಸರ್ವ ವ್ಯಾಪಿ ಎಂಬ ಭಾವನೆಯೇ
ಶ್ವಪ್ರೇಮದ ಮೂಲ ಮಂತ್ರವಾದರೆ ಗುರಿಯನ್ನು ಸಾಧಿಸಿದಂತೆಯೇ ಸರಿ.

* * *

ಮಹಾತ್ಮ ಗಾಂಧೀ ಹೇಳುವಂತೆ "ಪ್ರೇಮಶಕ್ತಿಯು ಈ ಜಗತ್ತಿನಲ್ಲಿ ಅತ್ಯಂತ ಬಲವಾದ ಶಕ್ತಿಯಾಗಿದೆ. ಮತ್ತು ಅದು ಕಲ್ಪನಾತೀತ ವಿನಯ ಶೀಲವಾದುದೂ ಆಗಿದೆ" ಇಂತಹ ಪ್ರೇಮ ಭಾವದಲ್ಲಿ ದೇವನ ದರ್ಶನ ಮಾಡಿಕೊಳ್ಳುವನು ಪರಮ ಭಕ್ತನು ಮತ್ತು ಪರಮ ಪ್ರೇಮಿಯು, ಇದೇ ಭಾವವನ್ನು ಈ ವಚನದಲ್ಲಿ ಬಸವೇಶ್ವರನು ಹೊರಗೆಡವಿರುತ್ತಾನೆ.

ಪರಮಾತ್ಮನಲ್ಲಿನ ಭಕ್ತಿಯು ನಿಷ್ಠಾ ಭಕ್ತಿಯ ಅವಸ್ಥೆಯನ್ನ ಹೊಂದಿದ ಕೂಡಲೆ ಅವನಲ್ಲಿ ಪರಮಾತ್ಮನ ಬಗ್ಗೆ ಪ್ರೇಮವು ಹೆಚ್ಚಾಗುವುದು. ಆಗ ಜಗತ್ತಿನ ಎಲ್ಲ ಸಿರಿಯನ್ನು ಅವನ ಚರಣಗಳ ಬಳಿ ಅತ್ಯಾನಂದದಿಂದ ಅರ್ಪಿಸುವನು. ಎಲ್ಲ ಸಿರಿ, ಎಲ್ಲ ಭಾಗ್ಯಗಳು ಅವನ ಭಕ್ತಿಯ ಆನಂದದ ಮುಂದೆ ತುಚ್ಛವಾಗಿ ಕಾಣುವವು. ಇದರಿಂದ ತ್ಯಾಗಮಂತ್ರದ ಗೀತೆಯು ಹೃದಯ ಮಂದಿರದಿಂದ ಕೇಳಿಸ ಬರುವುದು. ಇದನ್ನೇ ಸ್ವಾಮಿ ರಾಮತೀರ್ಥರು ಇಂತೆಂದಿರುವರು. ಈಶ್ವರ ಪ್ರೇಮ ಮತ್ತು ಈಶ್ವರ ಭಕ್ತಿ ಇವುಗಳು ನಮ್ಮಲ್ಲಿ ಬಂದ ಹೊರತಾಗಿ ತ್ಯಾಗ ಬುದ್ಧಿಯು ಬರಲಾರದು.

ಇಂತಹ ಪವಿತ್ರವಾದ ಸ್ವಾರ್ಥ ತ್ಯಾಗದ ಹೊನಲು ಉಕ್ಕಲು ಎಲ್ಲವನ್ನು ಪರಮಾತ್ಮನೇ ಆಕ್ರಮಿಸಿರುವನು. ಯಾವ ಪ್ರಾಣಿಯ ಹಿತಕ್ಕಾಗಲಿ, ಏನನ್ನು ಕೊಟ್ಟರೂ ಅದು ದೇಹವನ್ನು ಸೇರುವುದು. ಯಾರು ನನ್ನನ್ನು ಏನು ಕೇಳಿದರೂ, ಕೇಳುವವರೆಲ್ಲಾ ಪರಮಾತ್ಮನೇ ಎನ್ನುವ ಭಾವನೆಯು ಹೃದಯದಲ್ಲಿ ಹುಟ್ಟುವುದು. ಭಕ್ತಿಯ ಕಡಲು ಉಕ್ಕುತ್ತಿರುವಾಗ, ತ್ಯಾಗ ಗೀತೆ ಹಾಡುತ್ತಿರುವಾಗ ಜಗತ್ತಿನ ಯಾವ ಸಿರಿಯಾಗಲಿ, ಯಾವ ವೈಭವವಾಗಲಿ, ಯಾವ ಸುಖವಾಗಲಿ, ಭಕ್ತನ ಆನಂದದ ಮುಂದೆ ನಿಲ್ಲಲಾರದೆ, ಅವನ ಮನಸ್ಸನ್ನು ಸೆಳೆಯಲಾರದೆ, ಸ್ವಾರ್ಥದ ಬಂಧನ ವೇದಿಕೆಯ ಮೇಲೆ ಬಲಿ ಬೀಳುವುದು. ಈ ಅವಸ್ಥೆಯನ್ನು ಸ್ವಾಮಿ ವಿವೇಕಾನಂದರು ಈ ರೀತಿ ವರ್ಣಿಸಿರುವರು. "In this state of sublime resignation everything in the shape of attachment goes away completely, except that one all absorbing love to Him in whome all things live and move and have their being." ಈ ನಿಷ್ಠ ತ್ಯಾಗದ ಅವಸ್ಥೆಯಲ್ಲಿ ಜೀವಿಗಳಿಗೆ ಆ ವಾಸಸ್ಥಾನವಾದ ಪರಮಾತ್ಮನ ಮೇಲಿನ ಪ್ರೇಮವೊಂದು ಹೊರತು, ಉಳಿದುದೆಲ್ಲವೂ, ಪ್ರವೃತ್ತಿ ರೂಪವಾಗಿ ಭಾವಿಸಲ್ಪಟ್ಟು, ಪೂರ್ಣವಾಗಿ ಲಯ ಹೊಂದುತ್ತವೆ. ಇತರ ಆಶೆಗಳೆಲ್ಲಾ ಮನುಷ್ಯನನ್ನು ಬದ್ಧನನ್ನಾಗಿ ಮಾಡುವುವೆಂಬುದರ ಅರಿವಾಗುತ್ತದೆ. ಅದಕ್ಕಾಗಿಯೇ ಎಲ್ಲವನ್ನೂ ದೇವನಿಗೆ ಅರ್ಪಿಸಿ ಬಿಡುವನು.

ಪರಮಾತ್ಮನಿಗೆ ಅರ್ಪಣ ಮಾಡುವ ಬುದ್ಧಿಯು ಹೆಚ್ಚಾಗಿ ಬಸವೇಶ್ವರನು

ದೇವರಿಗೆ ಆಣೆ ಮಾಡಿ, ತನ್ನದೆಲ್ಲವನ್ನೂ ಸ್ವೀಕರಿಸಿ, ಉದ್ಧಾರ ಮಾಡಬೇಕೆಂದು ನುಡಿದಿರುವನು. ಇದನ್ನು ಅರವಿಂದ ಘೋಷರು ಇಂತು ನುಡಿದಿರುವರು. "If you want to be a true doer of divine works, Your first aim must be to be totally free from all desire and left regarding ego. All your life must be an offencing and a sacrifice to the supreme." ನೀನು ನಿಜವಾಗಿ ದೈವೀ ಸೇವೆ ಮಾಡಬೇಕೆಂದು ಇಚ್ಛಿಸುತ್ತಿದ್ದರೆ; ಎಲ್ಲ ಆಶೆ, ಮಾಯೆಗಳನ್ನು ತೊರೆಯುವುದೇ ನಿನ್ನ ಮೊದಲನೆಯ ಗುರಿ. ನಿನ್ನ ಜೀವನವೆಲ್ಲಾ ಒಂದು ಅರ್ಪಣ ವಾಗಬೇಕು. ದೇವನನ್ನು ಕುರಿತ ಒಂದು ಯಜ್ಞವಾಗಬೇಕು. ಬಸವೇಶ್ವರನು ಈ ತ್ಯಾಗದ ಮಂತ್ರವನ್ನು ಅನುಷ್ಠಾನ ಭಾವದಿಂದ ಘೋಷಿಸಿರುವನು. ಅವನ ತ್ಯಾಗ ಭಾವ, ಹಿರಿದಾದ ಭಕ್ತಿ, ವಿಶ್ವ ಪ್ರೇಮ ಭಾವನೆಗಳೆಲ್ಲ ಈ ವಚನದಲ್ಲಿ ಚೆನ್ನಾಗಿ ಮೂಡಿರುವುವು.

ಎಲೈ ಪರಮಾತ್ಮನೇ ಜಗತ್ತಿನಲ್ಲಿರುವ ಎಲ್ಲ ವಿಧವಾದ ಎಂಭತ್ತು ನಾಲ್ಕು ಲಕ್ಷ ಜೀವರಾಶಿಗಳಲ್ಲೆಲ್ಲಾ ನೀನೆ ಇದ್ದು ನನ್ನನ್ನು ಕಾಡಿ, ಬೇಡಿ ಎಲ್ಲವನ್ನು ತೆಗೆದುಕೋ, ನೀನು ಬೇಡುತಿರಬೇಕು. ಬೇಡದಿದ್ದರೆ ನಿನಗೆ ಭಕ್ತರಾಣೆಯಿರಲಿ. ಯಾವ ಆಕಾರದಲ್ಲಿ ಬಂದು ಬೇಡಿದರೂ ಕೊಡುವೆನು ಎಂದಿರುವನು.

# ಬಸವ ಕಲ್ಯಾಣ (ಭಾಗ—೨)

ಪಂ|| ಕೆ. ಪಿ. ಶಿವಲಿಂಗಯ್ಯ, ಪ್ರಿನ್ಸಿಪಾಲ್,
ಜೂನಿಯರ್ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು–3

## ಬಸವ ಕಲ್ಯಾಣದ ಪ್ರೇಕ್ಷಣೀಯ ಸ್ಥಳಗಳು:–

1. ಬಸವೇಶ್ವರರ ಗುಡಿ :—ಇದು ಕಲ್ಯಾಣಪಟ್ಟಣದ ನಡುವೆ ಇದೆ. ಇದರ ಬಗೆಗೆ ಒಂದು ದಂತಕಥೆ ಹೀಗಿದೆ.

ಕಲ್ಯಾಣ ಕ್ರಾಂತಿಯಾದ ಮೇಲೆ ಬಹಳ ವರ್ಷಗಳು ಕಳೆದಾಗ ಒಬ್ಬ ಹೆಣ್ಣು ಮಗಳು ಊರಿನ ಸಮೀಪದ ಒಂದು ಹೊಲದಲ್ಲಿ ಬಹಿರ್ದೇಶಕ್ಕೆಂದು ಹೋಗಿದ್ದಳು. ಆ ಹೊಲದಲ್ಲಿದ್ದ ಗೊಬ್ಬರದ ಗುಡ್ಡೆಯೊಂದರಿಂದ 'ನಾನು ಬರ್ತೀನಿ, ನಾನು ಬರ್ತೀನಿ' ಅಂತ ಶಬ್ದ ಬಂದಂತೆ ಆಕೆಗೆ ಕೇಳಿಸಿತು. ಭಯಗೊಂಡ ಆ ಹೆಂಗಸು ಊರೊಳಗೆ ಹೋಗಿ ಬುದ್ಧಿವಂತರಾದವರನ್ನು ಕರೆದುಕೊಂಡು ಆ ಸ್ಥಳಕ್ಕೆ ಧಾವಿಸಿ ತೋರಿಸಿದಳು. ಆಗಲೂ ಅದೇ ಶಬ್ದ ಬಂದಿತು, ಆ ಮನುಷ್ಯ ಧೈರ್ಯಮಾಡಿ ಬನ್ನಿ ಸ್ವಾಮಿ, ಬೇಡ ನೆಂದವರು ಯಾರು? ಎಂದು ಆಹ್ವಾನಿಸಿದರು. ಆಶ್ಚರ್ಯ! ಪುಟ್ಟ ವೃಷಭಮೂರ್ತಿ ಯೊಂದು ಪುದುಕ್ಕನೆ ಆ ಗುಡ್ಡೆಯ ಮೇಲಕ್ಕೆ ಬಂದಿತು. ಆಗ ಅವರೆಲ್ಲ ಸೇರಿ ಅತ್ಯಂತ ಭಯಭಕ್ತಿ ಸಹಿತ ಆ ಮೂರ್ತಿಯನ್ನು ಉತ್ಸವದಲ್ಲಿ ತೆಗೆದುಕೊಂಡುಬಂದು ಈಗ ದೇವಾಲಯವಿರುವ ಜಾಗದಲ್ಲಿ ಪ್ರತಿಷ್ಠಾಪಿಸಿದರು. ಆ ಮೂರ್ತಿಯೇ ಬೆಳೆದು ಬೆಳೆದು ಈಗಿರುವ ಬಸವೇಶ್ವರಮೂರ್ತಿಯಾಗಿದೆಯೆಂಬೂ ಇಂದಿಗೂ ಮಹಿಮಾಸ್ಪದ ಸ್ಥಳ ವಾಗಿ ಈ ಗುಡಿಯು ಭಕ್ತಿ ಸಮೂಹವನ್ನು ಆಕರ್ಷಿಸುತ್ತಿದೆಯೆಂದೂ ಇಲ್ಲಿನ ಜನರ ಅಂಬೋಣ. ಪ್ರತಿವರ್ಷ ಇಲ್ಲಿ ಜಾತ್ರೆ ನಡೆಯುತ್ತದೆ. (ಈ ದೇವಾಲಯದ ಪ್ರಾಂಗಣದಲ್ಲಿಯೇ ಈ ಲೇಖಕನಿಗೆ 1978 ಹಾಗೂ 1979 ಎರಡು ಸಂವತ್ಸರಗಳ ಲ್ಲಿಯೂ 'ಅಣ್ಣನವರ ಸಂದೇಶ' ಕುರಿತು ಮಾತನಾಡುವ ಸೌಭಾಗ್ಯ ಪ್ರಾಪ್ತಿಯಾಗಿ ದ್ದಿತು).

2. ಪರುಷ ಕಟ್ಟೆ :—ಬಸವೇಶ್ವರ ಗುಡಿಗೆ ಸಮೀಪದಲ್ಲಿದೆ. ಈ ಕಟ್ಟೆಯ ಮೇಲೆ ಬಸವಣ್ಣನವರು ಭಕ್ತರಿಗೆ ದೀಕ್ಷೆಕೊಟ್ಟು ಉಪದೇಶ ಮಾಡಿಸುವ ವ್ಯವಸ್ಥೆಮಾಡಿದ್ದ ರೆಂದೂ, ದಿನನಿತ್ಯ ದಾನಕೊಡುತ್ತಿದ್ದರೆಂದೂ ಐತಿಹ್ಯವುಂಟು. ಕ್ರಾಂತಿಯ ಅನಂತರ

ಅದನ್ನು ಆಕ್ರಮಿಸಿಕೊಂಡ ಮುಸಲ್ಮಾನ್ ವರ್ತಕರು ಆ ಸ್ಥಳದಲ್ಲಿ ಮಾಂಸವನ್ನು ವಿಕ್ರಯಿಸುತ್ತಿದ್ದರೆಂದೂ, ಅದು ದ್ವಿಗುಣಗೊಂಡು ಅತಿಲಾಭ ದೊರಕುತ್ತಿದ್ದುದರಿಂದ ವರ್ಷೇ ವರ್ಷೇ ಹರಾಜಿನ ಮೂಲಕ ಗುತ್ತಿಗೆ ಪಡೆಯಲಾಗುತ್ತಿತ್ತೆಂದೂ ಹೇಳಲಾಗುತ್ತಿದೆ. ಇದೀಗ ಅದು ಯಾವ ಗಲಾಟೆಯೂ ಇಲ್ಲದೆ ಪೂಜನೀಯ ಹಾಗೂ ಪ್ರೇಕ್ಷಣೀಯ ಸ್ಥಳವಾಗಿದೆ. ಇದರ ಹತ್ತಿರದ ಭೂಮಿಯಲ್ಲಿ ದೊರೆತ ಒಂದು ದೇವಿಯ ವಿಗ್ರಹವನ್ನು ದೆಹಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವರೆಂದು ಹೇಳುತ್ತಾರೆ. ಈ ವಿಗ್ರಹ ಯೋಗಮುದ್ರೆಯಲ್ಲಿದ್ದು ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವುದಂತೆ.

3. **ಬಿಜ್ಜಳರಾಯನ ಅರಮನೆಯ ದಿಬ್ಬ** :—ಸುಮಾರು 100 ಅಡಿ ಉದ್ದ, 70 ಅಡಿ ಅಗಲ, 10 ಅಡಿ ಎತ್ತರವಿರುವ ದಿಬ್ಬದಮೇಲೆ ಬಸವಣ್ಣನವರ ಕಾಲದಲ್ಲಿ ಆಡಳಿತ ನಡೆಸುತ್ತಿದ್ದ ಬಿಜ್ಜಳರಾಯನ ಅರಮನೆ ಇದ್ದಿತೆಂದು ತಿಳಿದುಬರುತ್ತದೆ. ಇದರ ಸುತ್ತ ಕೋಟೆ ಕಂದಕಗಳ ಕುರುಹುಗಳು ಕಾಣುತ್ತವೆ. (ಬಸವಣ್ಣನವರ ದಾಸೋಹದ ಗಂಜಿ ಹರಿದುಬರುತ್ತಿದ್ದ ಕಾಲುವೆಯೆಂದೂ ನಮಗೆ ಹೇಳಿದರು) ಈ ದಿಬ್ಬದ ಮೇಲೆ ಈಗ ಅತಿಥಿಮಂದಿರ (Guest House) ಅನ್ನು ಕಟ್ಟಿರುತ್ತಾರೆ.

4. **ಪೀರ್-ದರಗಾಹ (ದರ್ಗ)** :—ಕಲ್ಯಾಣದಲ್ಲಿ ಆಳಿದ ನವಾಬರುಗಳ ಗೋರಿಗಳಿರುವ ಈ ಸ್ಥಳದ ಬಳಿ ಹಿಂದೂಗಳ ಕಟ್ಟಡದ ಕಂಬಗಳನ್ನು ಹೊಂದಿದ ಮಂಟಪವಿದೆ. ಈ ಕಂಬಗಳು ಹಿಂದೆ ತ್ರಿಪುರಾಂತಕ ಕೆರೆಯ ಬಳಿ ಬಸವಣ್ಣನವರು ಸ್ಥಾಪಿಸಿದ್ದ ಅನುಭವ ಮಂಟಪದ ಕಂಬಗಳಾಗಿದ್ದುವೆಂದು ಹೇಳುತ್ತಾರೆ. ಈ ದರ್ಗ ಇರುವ ಜಾಗವೇ ಅನುಭವ ಮಂಟಪವಾಗಿದ್ದಿರಬಹುದೆಂದೂ ಕೆಲವರು ಊಹಿಸುತ್ತಾರೆ. ಇದರ ಸಮೀಪದಲ್ಲಿ ಚಾಲುಕ್ಯ ಜಗದೇಕಮಲ್ಲನ ಒಂದು ದೊಡ್ಡ ಶಿಲಾಲಿಪಿ [ಶಾಸನ] ಇದೆ.

5. **ಆದಿಗಣಪತಿಯ ಗುಡಿ** :—ಮನುಷ್ಯನ ಮುಖದಂತಿರುವ ಮುಖವನ್ನುಳ್ಳ ಗಣಪತಿಯ ಮೂರ್ತಿ ಸುಂದರವಾಗಿದೆ.

6. **ತ್ರಿಪುರಾಂತಕ ಊರು, ಕೆರೆ, ದೇವಾಲಯ** :—ಬಿಲ್ಹಣ ಕವಿಯಿಂದ ರಚಿತವಾಗಿರುವ ವಿಕ್ರಮಾಂಕ ಚರಿತ್ರೆಯಲ್ಲಿ ಇವುಗಳ ವರ್ಣನೆಯಿದೆ. ಇವು ಮೂರೂ ಅಕ್ಕಪಕ್ಕದಲ್ಲಿವೆ. ಈ ತ್ರಿಪುರಾಂತಕ ದೇವಾಲಯದಲ್ಲಿಯೇ ಶರಣ ಶ್ರೇಷ್ಠ ಕಿನ್ನರಿ ಬೊಮ್ಮಯ್ಯ ವಾಸಿಸುತ್ತಿದ್ದುದಾಗಿ ತಿಳಿದುಬರುತ್ತಿದೆ. ತ್ರಿಪುರಾಂತಕ ಕೆರೆಯ ಪಕ್ಕದಲ್ಲಿ ಒಂದು ಗಚ್ಚಿನ ನೆಲಗಟ್ಟಣೆಯಿದೆ. ಇದೇ ಅನುಭವ ಮಂಟಪವಿದ್ದ ಸ್ಥಳವೆಂದು

ೇರಿಸುತ್ತಾರೆ. ಇಲ್ಲಿಯೇ 'ಬಸವ ಸಮಿತಿ'ಯವರು ಅನುಭವ-ಮಂಟಪವನ್ನು
ು ನಿರ್ಮಿಸಬೇಕೆಂದು ಪ್ರಯತ್ನಿಸಿರುವುದು. ತ್ರಿಪುರಾಂತಕ ಊರಿನಲ್ಲಿ ಹನುಮಂತನ
ುಯೊಂದಿದೆ. ಇದರ ಬಳಿ ನಾಗರಿಲಿಪಿಯ ಶಿಲಾಶಾಸನವಿದೆ. ಇದರ ಮುಂದೆ
ಣ್ಣವಿನ ಮೂರ್ತಿ, ಅಕ್ಷಮಾಲಾ ಮತ್ತು ಪುಸ್ತಕ ಹಿಡಿದು ಕುಳಿತಿರುವ ಪುರುಷ
ಹ, ನಾಗನಾಗಿಣಿಯರು, ಶಿವ-ಪಾರ್ವತಿ ಮೊದಲಾದ ಮೂರ್ತಿಗಳಿವೆ. ಒಂದು
ರಗಲ್ಲು ಸಹ ಇಲ್ಲಿದೆ. ಬಹುಶಃ ಯುದ್ಧನಡೆದಿರುವ ಸ್ಥಳ ಇದಾಗಿದೆಯೆಂದು
ೇರುತ್ತದೆ.

**ರುದ್ರಮುನಿಗಳ ಗವಿ** :—ಇದು ತ್ರಿಪುರಾಂತಕ ಕೆರೆಯ ಪಶ್ಚಿಮ ದಂಡೆಯ
ಲಿದೆ. ಆಚಾರ್ಯ ರೇವಣಸಿದ್ಧರ ಪುತ್ರರಾದ ರುದ್ರಮುನಿಗಳು 'ಕಾಲಜ್ಞಾನ'
ನ್ನು ರಚಿಸಿದ್ದು ಅಲ್ಲಿಯೇ ಎಂದು ಹೇಳುತ್ತಾರೆ. ಈ ಗವಿಯನ್ನು ಘನಲಿಂಗ ಗವಿ
ಂದೂ ಕರೆಯುತ್ತಾರೆ. 'ಷಟ್‌ಸ್ಥಲಜ್ಞಾನಸಾರಾಮೃತ' ರಚಿಸಿದ ಶ್ರೀ ಸಿದ್ಧ
ಗೇಶ್ವರರ ಶಿಷ್ಯರೊಳ್ಲೊಬ್ಬರೂ ವಚನಕಾರರೂ ಆಗಿದ್ದ ಶ್ರೀ ಸುತ್ತೂರು 'ಘನ
ಂಗಗಳು' ಇಲ್ಲಿಗೆ ಆಗಮಿಸಿದ್ದು ಕೊಂಚಕಾಲ ಅನುಷ್ಠಾನ ಮಾಡಿದ್ದಿರಬಹುದೇ-
ನ್ನುವುದು ಸಂಶೋಧನೆ ಮಾಡಬೇಕಾದ ವಿಷಯ.

**ಬಿಲ್ವವನ** :-ರುದ್ರಮುನಿಗಳ ಗವಿಗೆ ಸಮೀಪದಲ್ಲಿಯೇ ಇರುವ ಬಿಲ್ವವನದ ವೃಕ್ಷ
ುದಾಯವು ಬಸವಣ್ಣನವರ ಕಾಲದಿಂದಲೂ ಉಳಿದು ಬಂದಿರುವುದು. 'ಶ್ರೀಶೈಲದ
ೇವನ' ಉಳಿದು ಬಂದಿರುವಷ್ಟೇ ಆಶ್ಚರ್ಯಕರ ಹಾಗೂ ಮಹಿಮಾಸ್ಪದ
ಯವಾಗಿದೆ.

**ವಿಜ್ಞಾನೇಶ್ವರರ ಗವಿ** :—ಇದು ರುದ್ರಮುನಿಗಳ ಗವಿಗೆ ಉತ್ತರದಲ್ಲಿದೆ.
ಲುಕ್ಯ ಆರನೆಯ ವಿಕ್ರಮಾದಿತ್ಯನ ಆಸ್ಥಾನ ಕವಿಗಳಾಗಿದ್ದ ವಿಜ್ಞಾನೇಶ್ವರರು
ತಾಕ್ಷರಸಂಹಿತೆ" ಯನ್ನು ಬರೆದುದು ಈ ಗವಿಯಲ್ಲಿಯೇ ಎಂದು ಸ್ಥಳ ಮಾಹಿತಿ
ಂದ ಗೊತ್ತಾಗುತ್ತದೆ. ಈ ಕವಿಗಳು ಕಲ್ಯಾಣನಗರವನ್ನು, ವಿಕ್ರಮಾದಿತ್ಯ ಪ್ರಭು
ನ್ನೂ ಈ ಕೃತಿಯಲ್ಲಿ ಪ್ರಶಂಸಿಸಿರುತ್ತಾರೆ.

**ಪ್ರಭುದೇವರ ಗುಡಿ** :—ಮುಸಲ್ಮಾನ ರೀತಿಯಲ್ಲಿ ಕಟ್ಟಿರುವ ಈ ಗುಡಿಯಲ್ಲಿ
ಭುದೇವರ ಗದ್ದುಗೆಯಿದೆ. ಇದರ ಮೇಲೆ ಕುಳಿತೇ 'ಅಲ್ಲಮಪ್ರಭು' ಪಾದಪೂಜೆ
ನ್ನು ಸ್ವೀಕರಿಸುತ್ತಿದ್ದರಂತೆ. ಈಗಲೂ ಇದರ ಮೇಲೆ ಸಿಹಿ ಪದಾರ್ಥವನ್ನಿಟ್ಟರೆ
ರುವೆ' ಮೊದಲಾದ ಯಾವ ಕೀಟವೂ ಮುತ್ತುವುದಿಲ್ಲ ಎನ್ನುವುದು ಪ್ರತ್ಯಕ್ಷ
ಮಾಣವೆನಿಸಿದೆ. ಎರಡು ಕೈಗಳಲ್ಲಿ ಕಮಲ ಹಿಡಿದ ಹಾಗೂ ಐದು ಹೆಡೆಯ
ವಿನ ಆಕಾರದ ಮೂರ್ತಿ, ಗಣಪತಿ, ವಿಷ್ಣು ಮೊದಲಾದ ವಿಗ್ರಹಗಳಿವೆ.

11. **ಮಡಿವಾಳ ಮಾಚಿದೇವರ ಗುಡಿ** :—ಪ್ರಭುದೇವರ ಗುಡಿಗೆ ದಕ್ಷಿಣದಲ್ಲಿದೆ. ಇಲ್ಲಿ ಸುತ್ತ ನೀರಿನ ಹೊಂಡವಿದೆ. ಈ ಗುಡಿಯು ಕಟ್ಟಡ ಕೂಡ ಮುಸಲ್ಮಾನ್ ಶೈಲಿಯಲ್ಲಿದೆ. ಇದರ ಗರ್ಭಗೃಹದಲ್ಲಿ ಎರಡು ಲಿಂಗಗಳಿವೆ. ಈ ಗುಡಿಯು ಹಿಂದಿನ ಗೋಡೆಯು ಮೇಲೆ ಅಕ್ಕನಾಗಮ್ಮನವರು ಇಷ್ಟಲಿಂಗ ಪೂಜೆಮಾಡುವ ಚಿತ್ರವಿದೆ. ಈ ಗುಡಿಯು ಮುಂದೆ ಅಂದರೆ ಆವರಣದಲ್ಲಿ ಒಂದು ಬಾವಿಯಿದೆ.

12. **ಬಸವಣ್ಣನವರ ಅರಮನೆಯು ಸ್ಥಳ** :—ಇಲ್ಲಿ ಒಂದು ಕಟ್ಟೆ, ಗಚ್ಚಿನ ಸ್ಥಳ ಕಾಣುತ್ತದೆ. ಇಲ್ಲಿಯೇ ಅಣ್ಣನವರ ಮಹಾಮನೆ ಇದ್ದಿತೆಂದು ಹೇಳುತ್ತಾರೆ, ಕಟ್ಟೆಯ ಮೇಲೆ ಲಿಂಗವಿದೆ, ಹತ್ತಿರದಲ್ಲಿ ಎರಡು ಲಿಂಗಗಳಿವೆ. ಪಕ್ಕದಲ್ಲಿ ಸವೆದುಹೋದ ಒಂದು ಹಳೆಯು ಕನ್ನಡ ಶಾಸನವಿದೆ.

13. **ಅಕ್ಕನಾಗಮ್ಮನವರ ಗವಿ** :—ಇದು ಅಣ್ಣನವರ ಮಹಾಮನೆಯ ಸಮೀಪದಲ್ಲೇ ದಕ್ಷಿಣಕ್ಕಿದೆ. ಇದರಲ್ಲಿ ಸುಂದರವಾದ ಕಲ್ಲಿನ ಕಂಬಗಳಿವೆ, ಕೈಯಲ್ಲಿ ಚಾಮರ [ಚಮರಿ] ಹಿಡಿದುಕೊಂಡಿರುವ ಸುಂದರ ವಿಗ್ರಹವನ್ನು ಅಕ್ಕನಾಗಮ್ಮನವರದೆ ಎಂದು ಹೇಳುತ್ತಾರೆ. ಇವರ ಮಕ್ಕಳಾದ ಚಿಕ್ಕದಂಡನಾಯಕ [ಚನ್ನಬಸವಣ್ಣ]ನವರೂ ಇಲ್ಲೇ ವಾಸಿಸುತ್ತಿದ್ದರೆಂದು ಬೇರೆ ಹೇಳಬೇಕಾಗಿಲ್ಲ.

14. **ಸಿದ್ಧೇಶ್ವರರ ಗುಡಿ** :—ಕಲ್ಯಾಣದಿಂದ ಒಂದು ಮೈಲಿ ದೂರದಲ್ಲಿ ಶಿವಪುರಕ್ಕೆ ಹೋಗುವ ದಾರಿಯಲ್ಲಿದೆ. ಸಿದ್ಧರಾಮೇಶ್ವರರು ದೀಕ್ಷೆಯನ್ನು ಸ್ವೀಕರಿಸಿದದು ಇಲ್ಲಿಯೇ ಎಂಬ ಹೇಳಿಕೆಯುಂಟು. ಸಿದ್ಧರಾಮರ ಗುಡಿಯೆಂದೂ ಕರೆಯುವುದುಂಟು.

15. **ಇತರ ಶರಣರ ಗವಿಗಳು** :—ತ್ರಿಪುರಾಂತಕದ ಊರಿನ ಹತ್ತಿರ ನುಲಿಯ ಚಂದ್ರಯ್ಯನವರ ಗವಿಯೂ, ಶಿವಪುರದಕಡೆ ಉರಿಲಿಂಗಪೆದ್ದಿ ಶರಣರ ಗವಿಯೂ, ಹಳ್ಳಿಯೆಂಬ ಗ್ರಾಮದ ಬಳಿ ಹರಳಯ್ಯನವರ ಹೆಸರಿನ ಗದ್ದುಗೆ ಮತ್ತು ಬಾವಿಯೂ ಹುಮನಾಬಾದ್‌ನಿಂದ ಕಲ್ಯಾಣಕ್ಕೆ ಹೋಗುವ ರಸ್ತೆಯ ಪಕ್ಕಕ್ಕೆ ಮೋಳಿಗೆಮಾರಯ್ಯನವರ ಕಾರ್ಯಕ್ಷೇತ್ರವೂ ಕಾಣಸಿಗುತ್ತದೆ.

16. **ಮಠಗಳು** :—ಕಲ್ಯಾಣಪಟ್ಟಣದಲ್ಲಿ 'ಮನೆಮನೆಗಳೆಲ್ಲ ಮಠಂಗಳಾಗಿಹವಯ್ಯ' ಎನ್ನುವ ಶರಣವಾಣಿಯಂತೆ ಅನೇಕ ಮಠಗಳುಂಟು ಅವುಗಳಲ್ಲಿ ಗೋಸ್ವಾಮಿಗಳ ಮಠ, ಕಂಬಳಿ ಮಠ, ಗಚ್ಚಿನ ಮಠ, ಹುಲಕಾಂತಿ ಮಠ, ಸದಾನಂದ ಮಠ ಇವು ಮುಖ್ಯವಾದವುಗಳು.

17. **ಬಂದವ (ಬಾಂಧವರ) ಓಣಿಯುನ್ನುವುದು** :—ಕಲ್ಯಾಣ ಪ್ರವೇಶ ದ್ವಾರದಲ್ಲಿರುವ ಒಂದು ನೀರಿನ ತಾಣ.

18) **ಬಸವತೀರ್ಥ:**—ಇದು ಹುಮನಾಬಾದಿಗೆ ನಾಲ್ಕೈದು ಮೈಲಿಗಳ ದೂರ ದಲ್ಲಿದೆ, ಇಲ್ಲಿ ಒಂದು ವೀರಶೈವ ಮಠವಿದ್ದು ಅನೇಕ ಸಾಂಸ್ಕೃತಿಕ ಕಾರ್ಯಕಲಾಪ ಗಳು ನಡೆಯಲು ಅವಕಾಶವಿದೆ ಇಲ್ಲಿ ಬಸವಣ್ಣನವರು ಒಮ್ಮೆ ಶಿವಪೂಜೆ ಮಾಡಿದ್ದ ರೆಂದು ಇಲ್ಲಿನವರು ಹೇಳುತ್ತಾರೆ.

ಒಟ್ಟಿನಲ್ಲಿ ಕಲ್ಯಾಣ ಪಟ್ಟಣವು ತ್ರಿಕಾಲಾಬಾಧಿತವಾದ ನಗರವೆಂದು ಕವಿಗಳು ಶ್ಲಾಘಿಸಿರುವಂತೆ ಐತಿಹಾಸಿಕ ಖ್ಯಾತಿಯನ್ನು ಹೊಂದಿರುವ ಸ್ಥಳ. ಸಕಲ ಜೀವಾತ್ಮ ರಿಗೂ ಲೇಸನ್ನೇ ಬಯಸಿ, ಅದಕ್ಕಾಗಿ ತಮ್ಮ ಜೀವಮಾನವನ್ನೇ ಸಮರ್ಪಿಸಿದ ಬಸ ವಾದಿ ಪ್ರಮಥರು ಜೀವಿಸಿದ ಈ ಮಹಾನಗರ ಯಾವಜ್ಜೀವವೂ ಒಂದು ದಿವ್ಯ ಸ್ಮಾರಕವಾಗಿರುವಂತಹುದು. ಅಂತೂ ವೀರಶೈವರಾದವರು, ತಂತಮ್ಮ ಜೀವಿತಕಾಲ ದಲ್ಲಿ ಒಮ್ಮೆಯಾದರೂ ಹೋಗಿ [ನೋಡಿ] ಬರಲೇಬೇಕಾದ ಸ್ಥಳವೆಂದು ಹೇಳದೆ ಗತ್ಯಂತರವಿಲ್ಲ. 'ಶರಣರು ಮೆಟ್ಟಿದ ಧರೆ ಪಾವನ' ಎಂಬ ಆರ್ಯೋಕ್ತಿಯಂತೆ ಇಲ್ಲಿನ ಒಂದೊಂದು ಕಣವೂ ನಮಗೆ ಪವಿತ್ರತಮ ವಸುಂಧರೆ.

---

## 15 ಬೇಡರ ಕಣ್ಣಪ್ಪ

ಶ್ರೀಮತಿ ಹೆಚ್. ಜಿ. ರಾಧಾದೇವಿ,
ನಂ. 12-1-17/4, ಬೀದೀಲುನಾಗಮ್ಮ ಮನೆ. ಗುಂಚ್ ರಸ್ತೆ ರಾಯಚೂರು-584101

ಚೋಳ ದೇಶದ ತಿರುಕಾಳಹಸ್ತಿಯ ಕಾಡಿನಲ್ಲಿ ಒಬ್ಬ ಬೇಟೆಗಾರನಿದ್ದ. ಆತನ ಹೆಸರು ಕಣ್ಣಪ್ಪ, ಬೇಟೆಯೆ ವೃತ್ತಿಧರ್ಮವಾಗಿದ್ದ ಕಣ್ಣಪ್ಪ ಬಲು ಮುಗ್ಧ.

ಒಮ್ಮೆ ಬೇಟೆಯಾಡುತ್ತಾ ಒಂದು ಮೃಗವನ್ನು ಅಟ್ಟಿಸಿಕೊಂಡು ಬಂದಿದ್ದಾನೆ. ಮೃಗ ಓಡೋಡಿ ಬಂದು ಆ ಅರಣ್ಯದಲ್ಲಿದ್ದ ತಿರುಕಾಳೇಶ್ವರನ ದೇವಾಲಯದ ಮುಂದೆ ಬಂದು ಅಲ್ಲಿಯೇ ಮಾಯವಾಗುತ್ತದೆ. ಕಣ್ಣಪ್ಪ ದೇವಾಲಯದ ಬಳಿ ಬಂದವನು ಮೃಗವನ್ನು ಕಾಣದೆ ಬಾಗಿಲನ್ನು ತಟ್ಟಿ–"ಎನ್ನವನೆ....ಬಾಗಿಲು ತೆಗೆ....ಎನ್ನಪ್ಪ ಬೇಗ ಬಾಗಿಲು ತೆಗೆ...." ಎಂದು ಕೂಗುತ್ತಾನೆ.

ಇದು ದೇವಾಲಯವೆಂಬುದಾಗಲಿ, ಒಳಗಿರುವುದು ಕಲ್ಲಿನ ಲಿಂಗವೆಂದಾಗಲಿ ಅರಿವಿಲ್ಲದ ಮುಗ್ಧನನ್ನು ನೋಡಿ ಶಿವ ಮನದಲ್ಲೆ ನಸುನಕ್ಕು ಬಾಗಿಲನ್ನು ತೆರೆಯುತ್ತಾನೆ. ಒಳಗೆ ಬಂದ ಕಣ್ಣಪ್ಪ–ಶಿವಲಿಂಗಕ್ಕೆ ತಲೆಬಾಗಿ "ಎನ್ನವನೆ....ನಿನ್ನ ಹೆಸರೇನು?" ಎಂದಾಗ ಲಿಂಗವೆ ಮಾತನಾಡಿ "ಶಿವಪ್ಪಾ" ಎಂದು ಉತ್ತರಿಸುತ್ತದೆ. "ಶಿವಪ್ಪಾ" ಎಂಥಾ ಸುಂದರ ಹೆಸರು ಎಂದು ಲಿಂಗವನ್ನು ಅಪ್ಪಿಕೊಂಡು ಕುಣಿದಾಡುತ್ತಾನೆ.

"ಎನ್ನವನೆ ಶಿವಪ್ಪ....ಎನ್ನೊಡೆಯ ಶಿವಯ್ಯ ನನಗೆ ಬಹು ಹಸಿವಾಗಿದೆ....ಬೇಟೆ ತಪ್ಪಿಸಿಕೊಂಡು ಹೊರಟುಹೋಯಿತು. ಅದು ಎಲ್ಲಿದೆ ಹುಡುಕಿ ತಾ....ಸಿಕ್ಕಿದರೆ.... ನನಗರ್ಧ....ನಿನಗರ್ಧ...."

ಎಂದು ಹೇಳುತ್ತಾನೆ, ಹೊರಗಡೆ ಮೃಗದ ಕಾಲಿನ ಸಪ್ಪಳ ಕೇಳಿಸಿತು, ಓಡಿ ಬಂದ, ಎನ್ನವನೇ ಒಂದೇ ಒಂದು ಕ್ಷಣದಲ್ಲಿ ಹುಡುಕಿ ಕೊಟ್ಟೆಯಾ....? ಎನ್ನುತ್ತ ಮೃಗವನ್ನು ಬೇಟೆಯಾಡಿ ಕೊಂದು ಅಲ್ಲೆ ಶಿವನೆದುರು ತಂದು ಬಿಡಿಸಿದ, ಪುರುಲೆ ತಂದು ಬೆಂಕಿ ಮಾಡಿ ಹದವಾಗಿ ಬೇಯಿಸಿದ.

ನಂತರ ಅದನ್ನು ಅರ್ಧಭಾಗ ಮಾಡಿ ತಂದು ಶಿವನೆದುರು ಇರಿಸಿ....ಎನ್ನವನೆ ತಿನ್ನು...ತಿನ್ನು, ಚೆನ್ನಾಗಿ ಹಸಿದಿರುವೆ ತಿನ್ನಯ್ಯ....ಓ ಏಕೆ ತಿನ್ನತ್ತಿಲ್ಲ, ಇಂದು ಮಾತ್ರ ಕೊಟ್ಟು ನಾಳೆಯಿಂದ ಉಪವಾಸ ಹಾಕುವೆ ಎಂದು ಹೆದರಿರುವೆಯಾ? ಇಲ್ಲಯ್ಯ....ಹಾಗೆ ಮಾಡಲಾರೆ ಒಮ್ಮೆ ಸ್ನೇಹವಾಯಿತು, ಪ್ರಾಣಹೋದರು ನಿನ್ನ ಬಿಡ ಲಾರೆ, ಈ ದಿನ ಬೇಟೆ ತೋರಿಸಿ ಉಪಕರಿಸಿದ್ದಿ, ಇನ್ನು ಪ್ರತಿ ದಿನ ನಾ ತಂದ ಬೇಟೆ ಯಲ್ಲಿ ಅರ್ಧ ನಿನಗೀವೆ, ಓ ಹುಳಿಹೆಂಡವಿದ್ದರೆ ಈ ಬೆಂದ ಮಾಂಸಕ್ಕೆ ರುಚಿ ಬಹಳ ವೆಂದು ಸುಮ್ಮನಿರುವೆಯಾ? ಈಗಲೆ ನಾನು ತಂದು ಕೊಡುವೆ".

ಎಂದು ತನ್ನ ಗುಡಸಿಲಿಗೆ ಹೋಗಿ ಹುಳಿಹೆಂಡದ ಮೊಗೆಯನ್ನು ಹೊತ್ತು ಕೊಂಡು ಓಡಿಬಂದು ಲಿಂಗದ ಎದುರು ಇರಿಸಿ...."ಈಗಲಾದರು ತಿನ್ನು ನಾಚಿಕೆ ಬೇಡಾ...ಓ ನನ್ನಯ್ಯ....ನಾನು ಎದುರಿಗಿರುವೆ ಎಂದು ನಾಚುತ್ತಿರುವೆಯಾ?" ಎಂದು ಹೇಳುತ್ತಾ ಹೊರಬಂದು ದೇವಾಲಯದ ಬಾಗಿಲು ಮುಚ್ಚಿ....''ಓ ನನ್ನೊ ಡೆಯ ಶಿವಪ್ಪ...ಚೆನ್ನಾಗಿ ಉಂಡು ನೀನು ಸುಖವಾಗಿರು, ನಾಳೆ ಪುನಃ ಹೊಸ ಮಾಂಸವನ್ನು ತಂದುಕೊಡುವೆ." ಎಂದು ಕೂಗಿ ಹೇಳಿ ತನ್ನ ಗುಡುಸಿಲಿಗೆ ನಡೆದ.

ಮಾರನೆ ದಿನವಾಯಿತು, ದೇವಾಲಯದ ಪೂಜಾರಿ ಹತ್ತಿರದ ಊರಲ್ಲಿದ್ದ ಪ್ರತಿ ದಿನ ಮುಂಜಾನೆ ಬಂದು ಮಂತ್ರೋಕ್ತವಾಗಿ ಪೂಜೆ ಮಾಡಿ ಅಭಿಷೇಕ ಮಾಡುತ್ತಿದ್ದ.

ಆ ದಿನಾ ಬಂದವನೆ....ಆ ಮಾಂಸದ ತುಂಡುಗಳು ಹಾಗು ಹುಳಿಹೆಂಡದ ಗಡಿಗೆ ನೋಡಿ ಚಕಿತನಾಗಿ ''ಶಿವ ಶಿವಾ....! ಏನಿದು ನಿನ್ನ ಗುಡಿಯಲ್ಲಿ ಇಂಥಾ ಅಪಚಾರ! ಯಾವ ಪಾಪಿ ಶಿವಾಲಯದಲ್ಲಿ ಇಂಥಾ ಅಸುರ ಕರ್ಮ ಮಾಡಿರುವಾ....? ನೀನು ಆ ಪಾಪಿಗೆ ಶಿಕ್ಷೆ ವಿಧಿಸಬಾರದಾಗಿತ್ತೆ ದೇವಾ ಎನ್ನುತ್ತ ಅದನ್ನೆಲ್ಲಾ ಮಾರು ದೂರದಾಚೆ ಶಿವಾಲಯದಿಂದ ಹೊರಗೆಸದು ಆಲಯ ಸಾರಿಸಿ ಪುಣ್ಯಾರ್ಚನೆ ಮಾಡಿ ತಾನು ಪುನಃ ಸ್ನಾನಮಾಡಿ ಬಂದು ರುದ್ರಸೂಕ್ತವನ್ನು ಹೇಳುತ್ತ ಶಿವನಿಗೆ ಬಿಲ್ವದಳದಿಂದ ಪೂಜಿಸಿ– ಮಲ್ಲಿಗೆ, ಸಂಪಿಗೆ ಅರ್ಚಿಸಿ ಹಾಲನ್ನು ಎರೆದು ಅಭಿಷೇಕ ಮಾಡಿ, ಗಂಧ ಹಚ್ಚಿ, ಧೂಪಗಳನ್ನು ಹೊತ್ತಿಸಿ ದೀಪಗಳನ್ನು ಹಚ್ಚಿದ.

ಶಿವನಿಗೆ ನಮಃ ಶಿವಾಯ ಎನ್ನುತ್ತಾ ಪ್ರದಕ್ಷಿಣೆ ಮಾಡಿ ನಮಸ್ಕಾರ ಮಾಡಿ ತಾನು ದೇವಾಲಯದಿಂದ ಮನೆಗೆ ಹೊರಟ, ಆದರೆ ಪುನಃ ಆ ದಿನ ಸಂಜೆ ಬಂದ ಕಣ್ಣಪ್ಪಾ ಹೊಸ ಬೇಟೆ ಹೊತ್ತು ತಂದಿದ್ದ, "ಓ ಎನ್ನವನೆ... ನೆನ್ನಿನದೆಲ್ಲ ತಿಂದು ಬಿಟ್ಟೆಯ? ಒಳಿತಾಯಿತು, ಈ ದಿನ ಪುನಃ ತಂದಿರುವೆ. ತಿನ್ನು ತಿನ್ನೆಂದೆನುತ ಮಾಂಸ ಹಾಗೂ ಹುಳಿಹೆಂಡವಿರಿಸಿ—" ನಿನಗೆ ನಾಚಿಕೆಯಾದರೆ ನೆನ್ನಿನಂತೆ ನಾನು

ಹೋದ ಮೇಲೆಯೇ ತಿನ್ನು, ಆದರೆ ನೀನು ಕಾಡಿನಲ್ಲಿ ಒಂಟಿಯೆಂದು ಅಂಜಿಕೊಳ್ಳಬೇ
ಕೂಗಳತೆಯ ದೂರದಲ್ಲಿ ಶಿವಪ್ಪಾ.... ನಾನಿದ್ದೇನೆ, ತುಂಬ ಭಯವಾದರೆ ನನ್ನನ
ಕೂಗು, ನಾನು ಬಂದು ನಿನಗೆ ಧೈರ್ಯ ಹೇಳಿ ರಕ್ಷಿಸುತ್ತೇನೆ.

ಈ ಹುಳಿಹೆಂಡ ಬಹು ರುಚಿಯಿದೆ ಶಿವಪ್ಪಾ, ಇದನ್ನು ಕುಡಿದರೆ ನಿನ
ಸೊಗಸಾದ ನಿದ್ರೆ ಬರುತ್ತದೆ. ರಾತ್ರಿ ಎಚ್ಚರವಾಗಿ.... ಅಂಜಿಕೆಯು ಆಗುವುದಿಲ್ಲ
ಎಂದು ಬುದ್ಧಿ ಹೇಳಿ ಶಿವಲಿಂಗವನ್ನು ಮತ್ತೆ ಮತ್ತೆ ಅಪ್ಪಿ ಮುದ್ದಿಸಿ— "ಎನ್ನವ
ಒಂದೇ ದಿನದಲ್ಲಿ ನಿನ್ನಮೇಲೆ ಬಹು ಸ್ನೇಹವಾಗಿಬಿಟ್ಟಿದೆ. ನಿನ್ನನ್ನು ಅಗಲಿ ನಾನ
ಇರಲಾರೆ." ಎಂದು ಕೊಂಚ ದೂರ ಹೋಗಿ ಮತ್ತೆ ಹಿಂತಿರುಗಿ ಬಂದು ಶಿವಲಿಂ
ವನ್ನಪ್ಪಿ ಮುದ್ದಿಸಿ "ಎನ್ನವನೆ ಬಹುಹೊತ್ತು ಹಸಿದಿರಬೇಡಾ, ನಾನು ಇಣು
ನೋಡುವುದಿಲ್ಲ. ನಾಚಿಕೊಳ್ಳದೆ ತಿಂದುಬಿಡು, ನಿದ್ರೆಗೆಡಬೇಡಾ, ಮೊಗೆ ಎ
ಚಪ್ಪರಿಸಿ ಕುಡಿ, ನಿನಗೆ ಚೆನ್ನಾಗಿ ನಿದ್ರೆ ಬರುತ್ತದೆ."

ಎಂದು ಹೇಳಿ ಬಿಡಲಾರದೆ ಬಿಟ್ಟು ಮನೆಗೆ ಹೊರಟ, ಮತ್ತೆ ಮರುದಿನ
ಬ್ರಾಹ್ಮಣ ಬಂದು ನೋಡಿ ಸಿಡಿಮಿಡಿಗೊಂಡು ಎಲ್ಲಾ ತೆಗೆದು ಶುದ್ಧಿ ಮಾ
ಸ್ನಾನ ಮಾಡಿ ಪೂಜಿಸಿ ಹೋದ.

ಇತ್ತ ಕಣ್ಣಪ್ಪ ಬೇಟೆಯಾಡಿ ಬರುತ್ತಾ ದಾರಿಯಲ್ಲಿ ಒಂದು ಕೊಳ ಕಂ
ಆಹಾ! ನೀರು ಎಷ್ಟು ಚೆನ್ನಾಗಿದೆ, ಎನ್ನವನಿಗೆ ಸ್ನಾನ ಮಾಡಿಸಬೇಕು, ಎಂದು ಇಳಿದ
ಬಾಯಿತುಂಬಾ ನೀರು ತುಂಬಿಕೊಂಡ, ಕೈಯಲ್ಲಿ ಹಿಡಿದರೆ ಆ ನ್ಯೈಲುದ್ದ ಹೋಗ
ವಲ್ಲಿ ಬೊಗಸೆಯ ನೀರು ಹನಿ ಹನಿಯಾಗಿ ಚೆಲ್ಲಿ ಹೋಗುತ್ತದೆ. ಹೆಗಲ ಮೇಲ
ಬೇಟೆಯಾಡಿದ ಪ್ರಾಣಿ, ಕೈಯಲ್ಲಿ ತನ್ನ ಮನಸ್ಸಿಗೆ ಚೆನ್ನಾಗಿ ಕಂಡ ಕಾಡಿನ ಪುಷ್
ಗಳು.... ಬಾಯಲ್ಲಿ ತುಂಬಿಕೊಂಡ ನೀರು....

ಶಿವಾಲಯಕ್ಕೆ ಓಡಿಬಂದ ಬಾಯಲ್ಲಿದ್ದ ನೀರನ್ನು ಶಿವಲಿಂಗದ ಮೇಲೆ ಉಗುಳು
ತ್ತಾನೆ. ಕಾಡು ಹೂವನ್ನು ಲಿಂಗದ ಮೇಲಿರಿಸಿ.... ಎನ್ನಯ್ಯ ಈ ದಿನ ತಂಪಾದ
ನೀರು ಸ್ನಾನ ಮಾಡಿಸಿರುವೆ, ಬಹು ಸುಖದ ನಿದ್ರೆ ಬರುವುದು ನಿನಗೆ, ಉಂಡು
ಮಲಗಿಬಿಡು" ಎನ್ನುತ್ತ ಶಿವನಿಗೆ ತಂದ ಮಾಂಸವನ್ನಿರಿಸಿ ಹೊರಟುಬಿಟ್ಟ.

ಪಾರ್ವತಿಗೆ ಬೇಸರವಾಯಿತು, "ಏನಿದು ಸ್ವಾಮಿ? ವಿಚಿತ್ರ! ಎನ್ನವನೆ....
ಎನ್ನುವುದೊಂದು ಮಂತ್ರವೆ? ಬಾಯಲ್ಲಿ ತುಂಬಿಕೊಂಡ ಎಂಜಲ ನೀರು ಉಗ್ಗಡಿಸಿ
ಮಾಂಸ, ಹೆಂಡ ತಂದು ಇರಿಸುವ ಈ ಭಕ್ತನಿಗೆ ಹಿಗ್ಗಿ ಹಾಕಿದ ಬೀಗಾ ತೆಗೆದು
ಬಾಗಿಲನ್ನು ತೆರೆಯುವಿರಲ್ಲಾ.... ಆ ಬ್ರಾಹ್ಮಣನ ಪಾಲಿಗೆ ಕಲ್ಲಾಗಿ.... ಈ ಬೇಡನ

ಪಾಲಿಗೆ ಶಿವನಾಗಿ ವಿಜೃಂಭಿಸುವೆಯಲ್ಲ ಏನಿದು ನಿಮ್ಮ ಲೀಲೆ ಎಂದಳು.

"ಪಾರ್ವತಿ ಭಕ್ತರಿಬ್ಬರ ಬಗ್ಗೆ ನಾಳೆ ತೋರುವೆ ಮನ ಶುದ್ಧಿ ಮುಖ್ಯವಲ್ಲದೆ ಬಾಹ್ಯ ಶುದ್ಧಿಯಲ್ಲ" ಎಂದು ಶಿವಾ ತನ್ನ ಅಂಗನೆಗೆ ತಿಳುಹಿದ.

ಮಾರನೆಯ ದಿನ ಬ್ರಾಹ್ಮಣ ಬಂದಾಗ ಶಿವಲಿಂಗದಲ್ಲಿ ಎರಡು ಕಣ್ಣಿನ ಆಕಾರ ಮಾಡಿ ಒಂದರಿಂದ ನೆತ್ತರು ಸೋರುತ್ತಿತ್ತು, ಬ್ರಾಹ್ಮಣಾ ನೋಡಿದವನೆ ತನ್ನ ಕೈಲಿದ್ದ ಪೂಜಾದ್ರವ್ಯಗಳನ್ನು ಬಿಸಟು—

"ಛಿ ಛಿ ಏನಿದು ಉತ್ಪಾತ.... ದೇಶಕ್ಕೇನು ಕೇಡೋ ಅಥವಾ ಭೂತ ಮಾಯೆಯೊ ? ಇನ್ನೊಲ್ಲೆ ಈ ಲಿಂಗಕ್ಕೆ ಪೂಜೆ" ಎಂದು ಹೊರಗೋಡಿಬಿಟ್ಟ.

ಸಂಜೆ ಕಣ್ಣಪ್ಪ ಬಂದ, ನೆತ್ತರು ಸುರಿವ ನೇತ್ರ ನೋಡಿದ, "ಎನ್ನವನೆ .... ಏನಿದು ! ನಿನ್ನ ಕಣ್ಣಿಗೆ ಏನು ಹಾನಿಯಾಯಿತು. ಚಿಂತಿಸದಿರು ನನ್ನ ಕಣ್ಣು ಚೆನ್ನಾಗಿದೆ. ಅದನ್ನೆ ನಿನಗಿಟ್ಟು ಈ ಒಸರುವ ರಕ್ತ ನಿಲ್ಲಿಸುವೆ." ಎನ್ನುತ್ತಾ ಕಠಾರಿ ತುದಿಯನ್ನು ಮೀಟಿ ತನ್ನ ಕಣ್ಣನ್ನು ಕಿತ್ತು ಶಿವಲಿಂಗಕ್ಕೆ ಅಂಟಿಸಿದ. ಲಿಂಗದಿಂದ ಸೋರುವ ರಕ್ತ ನಿಂತು ಫಳ ಫಳ ಕಣ್ಣು ಹೊಳೆಯಿತು. ತನ್ನ ಕಣ್ಣು ಕಿತ್ತ ಜಾಗದಿಂದ ಸುರಿವ ರಕ್ತವನ್ನು ಆ ನೋವನ್ನು ಗಮನಿಸದೆ ಕುಣಿದಾಡುತ್ತಾ— "ಎನ್ನವನೆ– ಒಂದು ನಿಮಿಷದಲ್ಲಿ ಗುಣ ಮಾಡಿಬಿಟ್ಟೆ. ಕಣ್ಣಿಗೆ ಕಣ್ಣೆ ಔಷಧವಾಯಿತು. ಈಗ ಎಷ್ಟು ಚೆನ್ನಾಗಿ ಕಾಣುವೆಯಲ್ಲೋ— ನಿನಗೆ ಈಗ ನೋವಿಲ್ಲ– ಹೇಗೆ ಸುಖವಾಗಿರುವೆ ಎಂದ.

ಆದರೆ ಶಿವಲಿಂಗದ ಮತ್ತೊಂದು ನೇತ್ರದಿಂದ ಈಗ ರಕ್ತ ಒಸರತೊಡಗಿತು. ಕಣ್ಣಪ್ಪ ಈಗ ಭೀತನಾದ, "ಅರರೆ! ಎನ್ನವನೆ! ಏನಿದು ? ಪುನಃ ರೋಗಕ್ಕೆ ಸಿಕ್ಕಿದೆಯಾ....? ಆದರೆ ಹೆದರದಿರು, ನನಗೆ ಇನ್ನೊಂದು ಕಣ್ಣಿದೆ, ಅದನ್ನು ಕಿತ್ತಿಡುವೆ ಎಂದು ಹೇಳಿ ತನ್ನ ಕಾಲನ್ನೆತ್ತಿ ಹೆಬ್ಬೆರಳನ್ನು ಲಿಂಗದಲ್ಲಿನ ರಕ್ತ ಒಸರುವ ನೇತ್ರಕ್ಕಾನಿಸಿ, ತಾನು ಕಠಾರಿ ಮೀಟಿ ಇನ್ನೊಂದು ಕಣ್ಣು ಕಿತ್ತು- ಹೆಬ್ಬೆರಳ ಗುರುತಿನ ಭಾಗಕ್ಕೆ ಅಂಟಿಸುತ್ತಾ... ಎನ್ನವನೆ– ಈಗ ಸರಿಹೋಯಿತಾ ? ನೀನೆ ಹೇಳು, ನನಗೀಗ ಕಾಣಿಸದು, ನಾಳೆಯಿಂದ ಆಹಾರ ಹೇಗೆಂದು ಚಿಂತಿಸದಿರು. ನೆಪ್ಪಿನ ಮೇಲೆ ಕಾಡೆಲ್ಲಾ ಸುತ್ತಿ, ಸಪ್ಪಳದಿಂದಲೆ ಬೇಟೆಯಾಡಿ ಆಹಾರ ನಿನಗೆ ತಂದುಕೊಡುವೆ ಎಂದು ಶಿವಲಿಂಗವನ್ನಪ್ಪಿ ಮುದ್ದಿಸಿ ಸಂತೈಸುತ್ತಿದ್ದಾನೆ–ಶಿವನನ್ನು ನೋಡುತ್ತಿದ್ದ ಪಾರ್ವತಿ ಬೆರಗಾದಳು. ಆಗ ಶಿವ ಪ್ರತ್ಯಕ್ಷನಾಗಿ ತನ್ನ ಭಕ್ತನಿಗೆ ಭಕ್ತಿಯೊಡನೆ ದಿವ್ಯವಾದ ಜ್ಞಾನವನ್ನು ಇತ್ತು ಅವನನ್ನು ಅಪ್ಪಿ– "ಭಳಿರೆ! ಕಣ್ಣಪ್ಪ, ನನ್ನೊಡನೆ ಕೈಲಾಸಕ್ಕೆ ಬಾ– " ಎಂದು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಕಣ್ಣಪ್ಪನಿಗೆ ಗಣ ಪದವಿಯನ್ನು ಕೊಡುತ್ತಾನೆ.

# ಉಮಾಶಂಕರ ದೀಕ್ಷೆ

—ಬಿ. ಹೆಚ್. ಶ್ರೀಧರ
C/o ಟಿ.ಎಸ್.ಎಸ್., ನಮಾಜಗುಡ, ಸಿರಸಿ, ಎನ್.ಕೆ., ಪಿನ್. 581402

ಕಾವ್ಯ-ಶಾಸ್ತ್ರಾದಿಗಳೆಲ್ಲವೂ ವಿದ್ಯೆಗಳು. 'ಸಾವಿದ್ಯಾಯಾ ವಿಮುಕ್ತಯೇ' ಸತ್ಯಾಸತ್ಯ, ಧರ್ಮಾಧರ್ಮ, ನ್ಯಾಯಾನ್ಯಾಯಗಳ ವಿವೇಕವು ವಿದ್ಯೆಯ ಆತ್ಯಂತಿಕ ಪರಿಣಾಮ—ಲೌಕಿಕವಾಗಿ ಕೂಡ.

ವಿದ್ಯೆಯು ಸಂಸ್ಕರಣ ಸಾಧನ, ಸಂಸ್ಕಾರದ ಮಟ್ಟವನ್ನು ಕೆಳಗಿಳಿಸುವುದು ಅಪವಿದ್ಯೆ. ನಮ್ಮ ರಾಜ್ಯದ ರಾಜ್ಯಪಾಲರಿತ್ತೀಚೆಗೆ ವಿದ್ಯಾರ್ಥಿಗಳು ವಿದ್ಯಾರ್ಥಿಗಳಾಗುತ್ತ ಹೋಗುತ್ತಿರುವ ಪ್ರವೃತ್ತಿಯನ್ನು ಅನುಲಕ್ಷಿಸಿ ತಮ್ಮ ಚಿಂತೆಯನ್ನು ವ್ಯಕ್ತಪಡಿಸಿದರು. ಮಾದಕ ಪದಾರ್ಥಗಳ ಸೇವನೆ ಮಹಾ ವಿದ್ಯೆಯಾಗುತ್ತಿರುವ ದೃಶ್ಯವು ಕರ್ನಾಟಕದ ನಗರಗಳಲ್ಲಿ ಹೆಚ್ಚುತ್ತಿರುವುದೂ ಆದರ ಫಲವಾಗಿ ವಿದ್ಯಾರ್ಥಿಗಳು, ಕೂಲಿಕಾರರು, ವಾಹನ ಸಾರಥಿಗಳು ಉದ್ವೇಗಜನಕವಾಗಿ ನಡೆದುಕೊಳ್ಳುವುದು ಹಿಂಸಾದ್ಯಪಘಾತಗಳಿಗೆ ಕಾರಣರಾಗುತ್ತಿರುವುದೂ ಸುವೇದ್ಯ. ಹಿಂಸೆ-ಕಾಮಾದಿಗಳ ಪ್ರಚೋದನೆಗೆ ಸಿನೆಮದ ಉನ್ಮಾದಕತೆ ಕೂಡ ಉಲ್ಲೇಖನೀಯ ಜೊತೆಗೆ ಜಾತಿಗಳ ಮತ್ತು ಕುಟುಂಬಗಳ ಶಾಂತಿಯನ್ನು ಕದಡುವಂಥ ಕತೆ, ಕಾದಂಬರಿ, ಪದ್ಯ ಮುಂತಾದವುಗಳ ಪ್ರಕಟನೆಗಳೂ ಈಗ ಮಾದಕಗಳಾದದ್ದುಂಟು. "ಜಾತಿಯು ಹೋಗಬೇಕು" ಎಂದು ಹೇಳುತ್ತ ತಿರುಗುವುದರಿಂದ ಜಾತಿದ್ವೇಷ, ಸೇಡಿನ ಮನೋಭಾವಗಳು ಹೆಚ್ಚುವಂತಾಗಿದೆ. ಈ ಅವಿದ್ಯೆಯಿಂದ ಮುಕ್ತಗೊಳಿಸಲು ಮಠಾಧೀಶರು ಅನುಗ್ರಹೋಪನ್ಯಾಸಗಳನ್ನು ಕೊಡುವ ಕೃಪೆ ಮಾಡಲಾರರೇ? ಹಿಂದೆ ಮಾಡಿದ್ದುಂಟು!

"ಪ್ರಜಾನಾಂ ವಿನಯಾಧಾನಾದ್
ರಕ್ಷಣಾದ್ ಭರಣಾದ ಪಿ।
ಸ ಪಿತಾ ಪಿತರಸ್ತಾ ಸಾಂ
ಕೇವಲಂ ಜನ್ಮಹೇತವಃ॥"

ಎಂಬುದು ದಿಲೀಪ ಮಹಾರಾಜನ ಸರ್ವ ಪಾಲಕತ್ವದ ವರ್ಣನೆ. ಅವನ ಸರಕಾರ ಹೊತ್ತ ಹೊಣೆಯನ್ನಿಂದು ನಮ್ಮ ಸರಕಾರಗಳು ಹೊರಲು ಮುಂದೆ ಬಂದಿರುವುದು ಇತ್ತೀಚೆಗೆ ಸನ್ಮಾನ್ಯ ಶಿಕ್ಷಣ ಮಂತ್ರಿಗಳು ಮಾಡಿದ ಭಾಷಣದಲ್ಲಿ ಕಂಡುಬಂದಿದೆ. ಶಿಕ್ಷಣಾಲಯಗಳ ಆಡಳಿತ ಕಟ್ಟಲ್ಲಿ ಸರಕಾರ ಕೈಹಾಕಬೇಕಾದೀತು ಎಂಬುದು ಅದರ ಸಾರ. ಸಂಯುಕ್ತ ಕರ್ನಾಟಕದ ಡಿಸೆಂಬರ್ ಒಂದರ ಸಂಪಾದಕೀಯದಲ್ಲಿ ವಿಶ್ವವಿದ್ಯಾನಿಲಯದ ಆಡಳಿತದಲ್ಲಿ ಸರಕಾರ ಹಸ್ತಕ್ಷೇಪ ಮಾಡುವುದು ಸಂತೋಷದ ಸಂಗತಿಯಲ್ಲ

ಎಂದು ಬರೆದಿದೆ. ಅದಕ್ಕೆ ಸರಕಾರಕ್ಕೆ ದಿಲೀಪ ಕೌಶಲವಿಲ್ಲವೆಂಬ ಶಂಕೆ ಬಹುಶಃ ಆಧಾರ. ಕೆಟ್ಟ ಸಂಸ್ಥೆಗಳ ಆಡಳಿತ ಮಂಡಲವನ್ನು ವಿಸರ್ಜಿಸಿ ಸರಕಾರಿ ಅಧಿಕಾರಿಗಳು ಅವುಗಳನ್ನು ಸುಧಾರಿಸಲು ಕೈಗೆ ತೆಗೆದುಕೊಂಡ ನಿದರ್ಶನಗಳೀಗ ಬಹಳ. ಅವು ಸುಧಾರಿಸುತ್ತಿವೆಯೆ? ನಗರ ಸಭೆಗಳತ್ತ ಕೂಡ ಈ ಬಗೆಗೆ ದೃಷ್ಟಿ ಹಾಯಿಸಬಹುದು.

ಸ್ವಸುಧಾರಣೆಗೆ ಅಶಕ್ತರಾದವರು ಪರ ಸುಧಾರಣೆ ಮಾಡುವುದರಲ್ಲಿ ಯಶಸ್ವಿಗಳಾಗುವುದು ದುರೂಹ್ಯ. ಈ ಶಕ್ತಿಯು ಮಾದಕ ಆವರಣದಿಂದಲೇ ಉಂಟಾದದ್ದು, ಮಾದಕತೆಯು ಅವಿದ್ಯೆಯ ಶಕ್ತಿ; ಮದ ಅದರ ಫಲ. ಕಾಮ, ಕ್ರೋಧ, ಲೋಭ, ಮತ್ಸರ, ಮೋಹಗಳು ಮದದ ಅನುಯಾಯಿಗಳು, ಮದದ ಆಧಿಕ್ಯದಿಂದ ಉನ್ಮಾದ!

ಮದ, ಉನ್ಮಾದಗಳಿಂದ ಅಪ್ತವಾದ ಮನಸ್ಸು ಸತ್‌ಸಂಕಲ್ಪ-ಸುವಿಚಾರಗಳನ್ನು ತನ್ನ ಹತ್ತಿರ ಇಟ್ಟುಕೊಳ್ಳಲಾರದು. ಮದವರ್ಧನ, ಮದಪ್ರಚೋದನೆ, ಮದ ಪ್ರಚಾರ, ಮದೌದ್ಧತ್ಯಗಳನ್ನು ಕಂಡು ಕಾಣದಂತಿರುವ ಆ ಈ ಗುರು-ಹಿರಿಯರುಗಳ ಹಾಗೂ ಅಧಿಕಾರ ಶಕ್ತಿವಂತರ ದೆಸೆಯಿಂದ ರಾಷ್ಟ್ರೀಯ ಬಲ ಕುಗ್ಗುವಂಥ ಘಟನೆಗಳು ಅಧಿಕವಾಗುತ್ತ ಹೋಗುತ್ತವೆ ಕೇಂದ್ರ ಸರಕಾರ ಆಪೇಕ್ಷಿಸುವಂತೆ ಜನದ ಅನ್ಯಾಯಗಳನ್ನು ಪ್ರತಿಭಟಿಸುವ ಕ್ರಮಬದ್ಧ ನಡತೆಯ ವೀರರಾಗಬೇಕು. ಆದರೆ ನ್ಯಾಯಾನ್ಯಾಯ ವಿವೇಕವು ಮದದಿಂದ ಉಪ್ತವಾಗುತ್ತದೆ, ಮೋಹದ ದೆಸೆಯಿಂದ ಮಂದವಾಗುತ್ತದೆ!

ಜನಸಾಕಣೆ ಕೋಳಿಸಾಕಣೆಗಿಂತ ಕಷ್ಟ. ಅಜೀರ್ಣಕ್ಕೆ ಮದ್ದು ಕೊಟ್ಟು ಹಸಿವನ್ನುಂಟು ಮಾಡಿ, ಆಹಾರ ತಿಂದಮೇಲೆ ಅದರ ಪಚನಕ್ಕೆ ಮದ್ದು ಕೊಟ್ಟು, ಪಚನವಾದುದರ ಅವಶೇಷವನ್ನು ವಿಸರ್ಜಿಸಲು ಮತ್ತೊಂದು ಮದ್ದನ್ನು ಕೊಡುವ ವೈದ್ಯನಂತೀಗ ಸರಕಾರಗಳು ನಡೆದುಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಿದೆ. ಸರಕಾರವೆಂಬ ಮನುಷ್ಯ-ಸಮುದಾಯದ ಘಟನೆ, ಸಂಹಿತೆ, ಸಂಘ ಇದಕ್ಕೆ ತಕ್ಕ ತಳಪಾಯದ ಮೇಲೆ ರಚಿತವಾಗಿದೆಯೇ? ಜಾತಿ ಪ್ರಾತಿನಿಧ್ಯದಿಂದ ಉಕ್ತ ಪ್ರಜಾಪಾಲನ ಕೌಶಲ ಸರಕಾರಗಳಿಗೆ ಬರುತ್ತದೆಯೇ? ವಿದ್ಯಾಭ್ಯಾಸವುಳ್ಳವರ ಆಯ್ಕೆಯಿಂದ ಅದು ಸಾಧ್ಯವೇ? ಎಂಬುದನ್ನು ನಮ್ಮ ಹಿತೈಕನಿಷ್ಠರಾದ ಮಂತ್ರಿವರ್ಯರೀಗ ಆಲೋಚಿಸುತ್ತಿರಬಹುದಾಗಿದೆ. ರಾಜ್ಯಶಾಸ್ತ್ರವು ಆಡಳಿತಶಾಸ್ತ್ರವನ್ನು ಒಳಗೊಂಡಿದೆ. ಆದುದರಿಂದ ರಾಜನೀತಿಕೋವಿದರಾದ ಧೋರಣ-ಶೌರ್ಯ ನಿರೂಪಣಕಾರರು ಈ ಆಪತ್ಕಾಲದಲ್ಲಿ ಸಂಪತ್ಕರ ವಿಧಾನಗಳನ್ನು ಶೋಧಿಸುತ್ತಿರುವುದು ಸಹಜ.

ವಿದ್ಯಾ (ಸುಸಂಸ್ಕೃತಿ, ಸುಧರ್ಮ) ಸಂಪತ್ತಿಗಿಂತ ದೊಡ್ಡ ಸಂಪತ್ತಿಲ್ಲ. ಸುವಿದ್ಯೆ-ದುರ್ವಿದ್ಯೆಗಳ ವಿವೇಕ ಸದ್ಯದ ವಿವಿಧ ಶಾಸ್ತ್ರಗಳ ಪಠ್ಯಗಳನ್ನು ಸ್ಮೃತಿಗತ ಮಾಡಿಕೊಳ್ಳುವಷ್ಟರಿಂದ ಲಭಿಸದು. ಆದರಲ್ಲೂ ಅಪಸ್ಮೃತಿ ಹೆಚ್ಚುತ್ತಿರುವುದು ದುಃಖಕರ;

ಚಿಂತ್ಯ, ಅವಿದ್ಯೆ ಅಥವಾ ದುರ್ವಿದ್ಯೆಯ ವಿದ್ಯೆ ಇಲ್ಲದೆಡೆಗಳಲ್ಲಿ ಯಾವಾಗಲೂ ತುಂಬಿ ಕೊಂಡಿರುತ್ತದೆ. ಖಾಲಿ ಮನಸ್ಸೆಂಬುದು ಕಾಲ್ಪನಿಕ, ವಾಸ್ತವಿಕವಾಗಿ ಇಲ್ಲ.

ಉಮಾಶಂಕರ ದೀಕ್ಷೆಗಿಂತ ದೊಡ್ಡ ದೀಕ್ಷೆ ಇಲ್ಲ. ಅದು ಸಮತ್ವವೆಂಬ ಯೋಗ ವಿದ್ಯೆಯ ಇನ್ನೊಂದು ಹೆಸರು. ಅದರಲ್ಲಡಗಿದ ಅರ್ಧನಾರೀಶ್ವರತ್ವ ಅಥವಾ ಪುರುಷ-ಪ್ರಕೃತಿಭಾವ ಸುದೀರ್ಘ ತಪಃ ಫಲ. ತಪಸ್ಸು ವಿಚಾರಮಂಥನದ ಅತ್ಯುನ್ನತ ವಿಧಾನ. ಆ ಗಂಭೀರ ವಿಮರ್ಶ ವಿಚಕ್ಷಣತೆ ಮಹಾಮಹೋಪಾಧ್ಯರಲ್ಲಿ (Holders of Doctorates) ಕೂಡ ಭಾರತೀಯ ಜನೋದಧಿಯ ಹಿತಸಾಧನೆಗೆ ಬೇಕಾಗುವಷ್ಟಿದ್ದಂತೆ ತೋರದು—ಬೇಕಾಗುವಂತಿದ್ದಂತೆಯೊ ಕಾಣದು. ಆದುದರಿಂದಲೇ ಮುದುಕರಿದನ್ನು ಕಲಿಕಾಲ ಎಂಬ ಸಾಂಕೇತಿಕ ಪದದಿಂದ ಕರೆಯುತ್ತಾರೆ. ಕಲಿಯಬೇಕಾದುದನ್ನು ಅಲಕ್ಷಿಸಿ, ಕಲಿಯಬಾರದುದನ್ನೇ ಕಲಿತುಕೊಳ್ಳುವುದು ಕಲಿಕಾಲೀನ ಪ್ರವೃತ್ತಿ. ಅದು ಅನುಮಾಮಹೇಶ್ವರ ದೀಕ್ಷೆ, ಮನುಷ್ಯ-ಸಮಾಜ ಸಮಾನತಾ ಸಾಧನೆ ಅನಾತ್ಮಜ್ಞರಿಂದ ಸಾಧ್ಯವಾಗುವಂಥದಲ್ಲ. ಆತ್ಮವು ಸದಾ (ಶುದ್ಧರೂಪದಲ್ಲಿ) ಸಜ್ಜನ ಹಿತೈಷಿ. ಅಂಥ ಆತ್ಮಸಿದ್ಧಿಗೆ ನಮ್ಮನ್ನು ನಮ್ಮ ವಿದ್ಯೆ-ವ್ಯವಹಾರಗಳು ಕೊಂಡೊಯ್ಯುತ್ತಿವೆಯೇ? ಅಸತ್‌ಪ್ರವೃತ್ತಿಯಿಂದ ನಮ್ಮನ್ನು ಮುಕ್ತಗೊಳಿಸುತ್ತಿವೆಯೇ? ಅಶೋಚ್ಯರ ಬಗೆಗೋ ಶೋಚ್ಯರ ಬಗೆಗೋ ಈ ಶೋಧನೆ? ನಮ್ಮ ರಾಜ್ಯಪಾಲರೆಂದು ಅಶೋಚ್ಯರ ಬಗೆಗೆ ಶೋಚಿಸರು. ವಯೋವೃದ್ಧಿ-ಜ್ಞಾನವೃದ್ಧಿಗಳ ಸಂಗಮಸ್ಥಲವಾದ ಅವರು ಮಾದಕ ವಸ್ತುಗಳ ಸೇವನೆಗೆ ಇಳಿಯುವ ಪ್ರವೃತ್ತಿಯನ್ನು ಖಂಡಿಸಿದ್ದ ಸರ್ವಗ್ರಾಹ್ಯ.

ಡಾಕ್ಟರರಾಗಿದ್ದವರಲ್ಲಿ ಕೂಡ ಕೆಲವರಿಂದು ಅತಿ ಮಾದಕ ಸೇವನೆಯಿಂದ ಹೃದಯಾಘಾತಕ್ಕೆ ತುತ್ತಾಗಿ ಮೃತಪಟ್ಟದ್ದುಂಟು. ಮಾದಕಗಳ ಸುಲಭ್ಯತೆ ಒಂದು ದಿಕ್ಕಿನಿಂದ ಕಡಿಮೆಯಾಗಬೇಕು. ಜೊತೆಗೇ ಮಾದಕಗಳ ದುಷ್ಪರಿಣಾಮಕತೆಯ ಚಿತ್ರಪ್ರದರ್ಶನಗಳೂ ನಡೆಯಬೇಕು. ರಶಿಯಾದಲ್ಲಿ ಇಂಥ ಪ್ರಚಾರಜಾಲದ ಬಲದಿಂದ ವೇಶ್ಯಾವೃತ್ತಿಯನ್ನೂ ಇತರ ದುರಭ್ಯಾಸಗಳನ್ನೂ ನಿಲ್ಲಿಸಿ ಎಲ್ಲ ಯುವಕ-ಯುವತಿಯರೂ ಮದುವೆಯಾಗಿ ಗೌರವಸ್ಥರಾಗಿ ಬಾಳುವಂತೆ ಮಾಡಿದ್ದಲ್ಲಿ ಸ್ಮರಣೀಯ. ದೇಹೇಂದ್ರಿಯ ಮನೋ ಮಾದಕಗಳ ವರ್ಜನವು ಸಮತ್ವದ (Balance of Mind) ಆಧಾರವಾಗಿರುವುದರಿಂದ ಅದೂ ಒಂದು ಉಮಾಶಂಕರ ದೀಕ್ಷೆಯೇ. ಪಾಲಕರೂ, ಬಾಲಕರೂ, ರಕ್ಷಕರೂ, ಪರೀಕ್ಷಕರೂ, ಆಡಳಿತಾಧಿಕಾರಿಗಳೂ ಮಾದಕ ವರ್ಜನ ಮಾಡುವುದು ಮಾನ್ಯಮಂತ್ರಿಗಳಿಂದಲೂ ಸೂಚಿತವಾಗಿದೆ. ಭ್ರಷ್ಟಾಚಾರಗಳೆಲ್ಲವೂ ಮದಜನ್ಯವಾದುದರಿಂದ, ಪ್ರಮಾದಗಳು ಭ್ರಷ್ಟಾಚಾರದಿಂದ ಉಂಟಾಗುವುವು. ಆದುದರಿಂದ ಸ್ವಾಧಿಕಾರ ಪ್ರಮತ್ತನಾದ ಯಕ್ಷನಿಗೆ ಕುಬೇರನ ಶಾಪ ಬಂತೆಂದು ಕಾಳಿದಾಸ ತನ್ನ 'ಮೇಘದೂತ' ಕಾವ್ಯದಲ್ಲಿ ಹೇಳಿದ್ದಲ್ಲಿ ಸ್ಮರಣೀಯವಲ್ಲವೇ?

ಎಂ. ಜಿ. ವೆಂಕಟೇಶಯ್ಯ,

41, ಮೂರನೇ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18

"ಯಾರ ವಿಚಾರ?" ಎಂದು ತಮ್ಮಣ್ಣ ಕೇಳಿದ. ಶಂಕರಶಾಸ್ತ್ರಿ ಗುಂಡು ಹೊಡೆದ ಹಾಗೆ ತನ್ನ ತರ್ಜನೀ ಬೆರಳನ್ನು ಅವಳ ಕಡೆಗೆ ತಿರುಗಿಸಿದ. ಅವಳು ಚೆಲುವೆ. "ನೋಡಲು ರೂಪವತಿ. ಒಳ್ಳೆಯ ಗಂಡನೇ ಸಿಗುತ್ತಾನೆ." ಎಂದ ತಮ್ಮಣ್ಣ.

"ಸಿಗುತ್ತಾನೆ! ಮದುವೆಯಾಗದಿದ್ದರೆ"

"ಮದುವೆಯಾಗಿದೆಯೆ! ಹಾಗಾದರೆ ಯಾಕಪ್ಪ ಟಪ್ಪುಟಪ್ಪು ಕೆಲಸ?"

"ಮೊನ್ನೆತಾನೆ M.A. ರಿಸಲ್ಟ್ ಬಂತು Pass ಆಗಿದೆ." ಆದರೂ

"ಏನೋ ಕತೆ ಇದ್ದ ಹಾಗೇ"

"ಹೌದಪ್ಪ, ಇದೆ"

"ಬೆಕ್ಕಿಗೆ ಚಲ್ಲಾಟ, ಇಲಿಗೆ ಪ್ರಾಣಸಂಕಟ!"

ಕಛೇರಿಯಲ್ಲಿ ಅದು ಫಲಾಹಾರ ಸಮಯ. ಎಲ್ಲರೂ ಟೀಗೆ ಹೋಗಿದ್ದರು ಆ ಚಲುವೆ—ಸುಂದರಿ—ಯೂ ಇದ್ದಕ್ಕಿದ್ದ ಹಾಗೆ ಎದ್ದಳು. ಅವಳು ಅಲ್ಲಿಂದ ಆಚೆಗೆ ಹೋದಮೇಲೆ ಕತೆ ಮುಂದುವರಿಯಿತು. ಶಂಕರಶಾಸ್ತ್ರಿಯು ಒಂದು ಚಿಟಿಕೆ ನಶ್ಯ ವನ್ನು ಮೂಗಿನಲ್ಲಿ ಏರಿಸಿದ; ಗಂಟಲನ್ನು ಸರಿಮಾಡಿಕೊಂಡ. ಎಂಥಾ ಸಂಗೀತಗಾರ ನಾದರೂ ಆ ಶಬ್ದ ಸಂಕುಲವನ್ನು ಮೆಚ್ಚಬೇಕಾದದ್ದೇ ಶಂಕರಶಾಸ್ತ್ರಿ ಹೇಳಿದ–"ಕನ್ಯಾ ಪರೀಕ್ಷೆಯಾಯಿತು, ವರನಾದವನು ಒಪ್ಪಿಕೊಂಡ.

"ಹಾಗಂತ ವರ ಬಾಯಿಬಿಟ್ಟು ಹೇಳಿದನೆ!"

"ವರಗಳು ಬಾಯಿ ಬಿಡೊಲ್ಲ ಅವರ ಕೈಗೆ ಸಿಕ್ಕಿಕೊಂಡ ನಾವು ಬಾಯಿಬಾಯಿ ಬಿಡಬೇಕು ಅಷ್ಟೆ. ಅವನ ಪರವಾಗಿ ಅವನ ತಾಯಿ ತಂದೆ ಒಪ್ಪಿದರು. ವರೋಪ ಚಾರ, ಮದುವೆ ಮಂಟಪ, ಎಲ್ಲಾ ಸೇರಿ 30,000 ರೂಪಾಯಿ ಖರ್ಚಿದೆ. ವರ ದಕ್ಷಿಣೆ 5000 ರೂ."

"ಅಂತೂ ಇಂತೂ ವಧುವಿನ ತಂದೆಗೆ ತಲೆ ಬೋಳಿಸಬೇಕು. ಈ ಹಾಳು ವರ ದಕ್ಷಿಣೆ ಯಾಕೆ ಕೇಳ್ಬೇಕೊ?"

# ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ,

**ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-1.**

## ಕ್ಯುಮುಲೇಟಿವ್ ಡಿಪಾಜಿಟ್ ಯೋಜನೆ :

ಈ ಯೋಜನೆಯಲ್ಲಿ ಕೇವಲ ರೂ. 5-00ಗಳ ಅಥವಾ ಅದರ ಗುಣಾಂಕ ಮೊತ್ತವನ್ನು ಠೇವಣಿ ಇಟ್ಟು ಆರಂಭಿಸಬಹುದು. ಕನಿಷ್ಟ 12 ತಿಂಗಳುವರೆಗೆ ಪ್ರತಿ ತಿಂಗಳ ಅಷ್ಟೇ ಹಣವನ್ನು ಠೇವಣಿ ಇಡುತ್ತಾ ಬಂದರೆ ಈ ಕೆಳಗೆ ಕಾಣಿಸಿರುವಂತೆ ನಿಮ್ಮ ಹಣವನ್ನು ಬಡ್ಡಿ ಸಹಿತ ಮರಳಿ ಪಡೆಯಬಹುದು

**ಕ್ಯುಮುಲೇಟಿವ್ ಡಿಪಾಜಿಟ್ ಠೇವಣಿಯ ಮೇಲೆ ವಾಯಿದೆ ಅಂತ್ಯಕ್ಕೆ ತಿಂಗಳ ಠೇವಣಿ ರೂ. 10-00 ರಂತೆ**

| ತಿಂಗಳ ಅವಧಿ | ನೀವು ತುಂಬುವ ಠೇವಣಿಯ ಮೊಬಲಗು | ವಾಯಿದೆ ನಂತರ ಸಿಗುವ ಮೌಲ್ಯ | ಶೇಕಡ |
|---|---|---|---|
| 12 | 120–00 | 126–00 | 9.23 ಶೇ. |
| 24 | 240–00 | 266–50 | 10.58 ಶೇ. |
| 36 | 360–00 | 427–50 | 12.15 ಶೇ. |
| 48 | 480–00 | 603–80 | 12.63 ಶೇ. |
| 60 | 600–00 | 822–20 | 14.57 ಶೇ. |
| 72 | 720–00 | 1,053–50 | 15.21 ಶೇ. |
| 84 | 840–00 | 1,313–70 | 15.92 ಶೇ. |
| 96 | 960–00 | 1,606–60 | 16.66 ಶೇ. |
| 108 | 1,080–00 | 1,936–20 | 17.45 ಶೇ. |
| 120 | 1,200–00 | 2,307–80 | 18.30 ಶೇ. |

## ಮಹೇಶ್ವರ ನಿತ್ಯನಿಧಿ:

ಈ ಯೋಜನೆಯಲ್ಲಿ ಕೇವಲ ರೂ. 1–00 ರಲ್ಲಿ ಮಾತ್ರವೇ ಖಾತೆಯನ್ನು ಆರಂಭಿಸಬಹುದು. ಪ್ರತಿ ನಿತ್ಯವೂ ನಮ್ಮ ಬ್ಯಾಂಕಿನ ಡಿಪಾಜಿಟ್ ಪ್ರತಿನಿಧಿ ನಿಮ್ಮ ಮನೆ ಅಂಗಡಿಗಳಿಗೆ ಬಂದು ಹಣ ಸಂಗ್ರಹಿಸುತ್ತಾರೆ. ಈ ಕೆಳಗೆ ಕಾಣಿಸಿರುವಂತೆ ನಿಮ್ಮ ಹಣ ಮತ್ತು ಬಡ್ಡಿ ಸಹಿತ ಮರಳಿ ಪಡೆಯಬಹುದು.

| | | |
|---|---|---|
| 12 ತಿಂಗಳು ಮೇಲ್ಪಟ್ಟು | 24 ತಿಂಗಳ ಒಳಗೆ | ಶೇ. 3 |
| 24 ,, | 36 ,, | ಶೇ. 4 |
| 36 ,, | 48 ,, | ಶೇ. 5 |
| 48 ,, | 60 ,, | ಶೇ. 6 |
| 61 ತಿಂಗಳ ಮೇಲ್ಪಟ್ಟು..... | ..... ..... ..... ..... | ಶೇ. 7 |

ತಾ|| 1–1–80 ರಿಂದ ಆದ ಠೇವಣಿಗಳಿಗೆ 6 ತಿಂಗಳ ನಂತರ ಬಡ್ಡಿ ರಹಿತವಾಗಿ ವಾಪಸ್ ಕೊಡಲಾಗುವುದು.

**ಕಾರ್ಯ ನಿರ್ವಾಹಕ ಮಂಡಲಿ**

"ಎರಡು ಕಾರಣ, ಅಳಿಯ ಹತ್ತನೆಯ ಗ್ರಹ! ಕೇಳದೇ ಇದ್ದರೆ ಅವನಿಗೆ ಏನೋ ರೋಗ ಎಂದು ಜನ ಆಡಿಕೊಳ್ಳುತ್ತಾರೆ! ದೊಡ್ಡ ಕಲ್ಯಾಣ ಮಂದಿರ ಏಕೆಂದರೆ ಮಾವನ ಖರ್ಚಿನಲ್ಲಿ ಅಳಿಯ ಊರಿನಲ್ಲಿರುವವರಿಗೆಲ್ಲ ಸಮಾರಾಧನೆ ಮಾಡಿ ಸೈ ಎನಿಸಿ ಕೊಳ್ಳಬೇಕು, ಅದು ಯಶಸ್ಸು! ಇದ್ದವರು ಇಲ್ಲದವರಿಗೆ ಹಿಂದಿನ ಕಾಲದಲ್ಲಿ ಅನ್ನ ಹಾಕುತ್ತಿದ್ದರು. ಈಗ ಇಲ್ಲದವರು ಇದ್ದವರಿಗೂ ಸಾಲಮಾಡಿ ಅನ್ನಹಾಕಬೇಕು– ಸಾಲಂಕೃತ ಕನ್ಯಾದಾನ!"

"ಸಾಲಂಕೃತ?"

"ಸಾಲಂ–ಸಾಲವನ್ನು ಕೃತ–ಮಾಡಿ!"

"ಹೆಣ್ಣು ಹೆರುವುದೇ ಪಾಪ!"

"ಇನ್ನು ನಾಲ್ಕು ಸಲ ಹಾಗೆನ್ನಿ! ಅದರೊಳಗೂ ಉಪಾಧ್ಯಾಯ ವೃತ್ತಿಯಲ್ಲಿ ಹೊಟ್ಟೆ ಹೊರೆದುಕೊಳ್ಳುವವನಿಗೆ ಧರ್ಮವೀರನ ಗುಂಪು!"

"ಅಂದರೆ?"

"1963 ರ ಹಿಂದೆ ರಿಟೈರ್ ಆದ ಜಿಲ್ಲಾ ಸ್ಕೂಲು ಮೇಷ್ಟ್ರು ಪೆನ್‌ಷನ್ ಇಲ್ಲದೆ ರಿಟೈರ್ ಆದವರು. ಅವರ ಕಷ್ಟ ನೋಡಲಾರದೆ ಗವರ್‌ನರ್ ಆಗಿದ್ದ ಪುಣ್ಯಾತ್ಮ ಧರ್ಮವೀರ 1970 ರಿಂದ ತಿಂಗಳಿಗೆ 40 ರೂ. ಪೆನ್‌ಷನ್ ಕೊಟ್ಟ. ಆಗ ಒಂದು ರೂಪಾಯಿಗೆ 13 ಸೇರು ಗೋಧಿ, ಈಗ ಒಂದು ಸೇರು ಗೋಧಿಗೆ ಆರು ರೂಪಾಯಿ. ಮುಂದಕ್ಕೆ 13 ಆದರೂ ಹೆಚ್ಚಲ್ಲ! ಇದ್ದ ಒಂದು ಮನೆಯನ್ನು ಮಾರಿ ವಧುವಿನ ತಂದೆ ಭರ್ಜರೀ ರಿಸೆಪ್ಷನ್ ಮಾಡಿಬಿಟ್ಟ, ಮದುವೆ ಆಯ್ತು!

"ಆಮೇಲೆ?"

"ಪ್ರಸ್ಥದ ಕೋಣೆ! ವಧು ವರನಿಗೆ ಕಾಯುತ್ತ ಕುಳಿತಿದ್ದಳು. ವರನ ನಡಿಗೆ ಶಬ್ದ ಕೇಳಿ, ಬಾಗಿಲ ಬಳಿ ಬಂದು ಬಾಗಿಲು ತೆಗೆದಳು ವರ ಒಂದು ಹೆಜ್ಜೆ ರೂಂನಲ್ಲಿಟ್ಟ ವಧುವನ್ನು ತಬ್ಬಿಕೊಂಡು ಬಿದ್ದ, ಬಾಯಲ್ಲಿ ಬುರುಗು! ವಧು ಚೀರುತ್ತಾ ಈಚೆಗೆ ಬಂದಳು ಒಂದು ಸಣ್ಣ ಗುಂಪೇ ಅಲ್ಲಿಗೆ ಹೋಯಿತು!"

"ಏನಾಯಿತೋ?"

"ಮೂರ್ಛೆ! ಆ ವರನಿಗೆ..."

"ತಂದೆ ತಾಯಿ ಅದನ್ನು ಮುಚ್ಚಿಟ್ಟು...."

"ಮದುವೆ ಮಾಡಿದರು!"

"ನನಗೆ ಮೋಸ ಮಾಡಿ ಇಂಥಾ ಮದುವೆ ಮಾಡಿದ್ದರಿಂದ ನಿಮಗೇನು ಬಂತು? ಎಂದಳು ವಧು ಸುಂದರಿ."

''ಹಾಗೆಲ್ಲಾ ಮಾತಾಡಬಾರದು! ಅವನಿಗೆ ಏನಾಗಿದೆ! ಒಂದು ಸಲ ಹಾಗೆ ಳ್ತಾನೆ! ವಾರಕ್ಕೆ ಒಂದು ಸಲ ಈ ಮೂರ್ಛೆ, ಇದೇನೋ ಬಹು ದೊಡ್ಡ ವಿಚಾರ ಂತ ತಿಳುಕೋಬಾರದು. ಏನಾಯ್ತು! ಏನೂಯಿಲ್ಲ?" ಎಂದಳು ಅತ್ತೆಯಾದ ಂಗಸು.

''ಅನ್ಯಾಯ!''

"ಇದುವರೆಗೂ ನಾವು ನೋಡಿಕೊಳ್ತಾಯಿದ್ದೆವು, ಇನ್ನುಮೇಲೆ ಅವನನ್ನು ೀವೇ ನೋಡಿಕೋಬೇಕು—ಎಂದ ಆ ಮಾವ"

''ಏನೋ ನಿನ್ನ ಮಾಂಗಲ್ಯ ಚೆನ್ನಾಗಿದ್ದರೆ, ಅವನಿಗೆ ಈ ರೋಗ ವಾಸಿ ಾಗುತ್ತೆ! ಮದುವೆಯಾದಮೇಲೆ ಗಂಡನ ಕಷ್ಟ ಹೆಂಡತೀಗೆ ಸೇರಿದ್ದೇ! ಎಂದ ಾವ."

ಅತ್ತೆ ಧರ್ಮಸೂಕ್ಷ್ಮ ಹೇಳಿದಳು, ''ಮದುವೆಯಾಯ್ತು ಸಪ್ತಪದಿಯಾದ ಮೇಲೆ ೀವು ದಂಪತಿಗಳು ನೀನು ಅವನ ಗೃಹಿಣಿ!" ತಾಳಿ ಇರೋವರೆಗೂ ಹಾಗೆ!

ವಧೂಗೆ ತಾಳಲಾರದಷ್ಟು ಸಂಕಟ ಕೋಪಗಳೆರಡೂ ಹೆಚ್ಚಿತು. ''ತಾಳಿ ಇರೋವರೆಗೆ!" ಎನ್ನುತ್ತಾ ತನ್ನ ಎಡಗೈಯಿಂದ ಕುತ್ತಿಗೆಯಲ್ಲಿದ್ದ ತಾಳಿಯನ್ನು ಕಿತ್ತು ಿಸಾಟಳು, ವರನ ಕಡೆ ಜನಾ ಹಾಹಾಕಾರ ಮಾಡಿದರು ವಧೂ ತಂದೆಗೆ ಗುಡ್ಡ ತಲೆಯಮೇಲೆ ಬಿದ್ದ ಹಾಗಾಯಿತು. ರಾತ್ರಿ ಊಟಕ್ಕೆ ಬಂದ ಜನರೆಲ್ಲಾ ಹಾಹಾಕಾರ ಮಾಡಿದರು. ಆದರೆ ಊಟ ಮಾಡದೆ ಯಾರೂ ಹೋಗಲಿಲ್ಲ."

"ಅನ್ಯಾಯ!!"

"ಅಲ್ಲಿಯ ಮದುವೆ ವೈಭವ ಅಷ್ಟಕ್ಕೇ ನಿಂತಿತು. ಮಾರನೇ ದಿವಸವೇ ಇಲ್ಲಿ ಆಕೆ Typist ಆಗಿ ಸೇರಿದಳು."

''ಹೌದಂದರೆ! ಎಲ್ಲಿಯವರೆಗೆ ಹುಡುಗಿಯರು ತಂದೆ ಪೋಷಣೆಯಲ್ಲಿರು ತ್ತಾರೆಯೋ ಅಲ್ಲಿಯವರೆಗೆ ಅವರಿಗೆ ಈ ವರದಕ್ಷಿಣೆ ತಪ್ಪಿದ್ದಲ್ಲ. ನಮ್ಮ ಸಮಾಜ, ತೆಗಳುತ್ತೆ! ಸಹಾಯ ಮಾಡೊಲ್ಲ."

''ಸಪ್ತಪದಿ ಎಂದರೆಲ್ಲಾ''

"ಮದುವೆಯೆಲ್ಲಾ ಆದ ಮೇಳೆ ಗಂಡ ಹೆಂಡತಿ ಕೈ ಹಿಡಿದು ಕೊಂಡು ಯಜ್ಞೇ ಶ್ವರನಿಗೆ ಸುತ್ತು ಹಾಕುತ್ತಾರೆ. ಹಾಗೆ ಏಳು ಹೆಜ್ಜೆ ಇಟ್ಟರೆ ಕೂಡ ಮದುವೆ ಆದ ಹಾಗೇ. ಈ ಏಳು ಹೆಜ್ಜೆಗೆ ಸಪ್ತಪದಿ ಎನ್ನುತ್ತಾರೆ.''

# ಮನದ ಆಶೆಯೇ ಮಾಯೆ (ವಿಚಾರ ಲಹರಿ):—

—ನ. ಮುನಿ ಸ್ವಾಮಿ
"ಶಾಂತಿ ನಿಲಯ"
ನಂ. 622, 3 ನೆಯ ಮುಖ್ಯ ಬೀದಿ. ಕೆಂಗೇರಿ ಉಪನಗರ ಬೆಂಗಳೂರು (560060)

"ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆ ಎಂಬರು ಹೆಣ್ಣು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ." ಎನ್ನುವುದು ಅಲ್ಲಮ ಪ್ರಭುವಿನ ಅಮೃತ ವಚನ. ನಮ್ಮ ಮನಸ್ಸಿನಲ್ಲಿ ಹುಟ್ಟುವ ಸಕಲ ವಿಧ ಭ್ರಾಂತಿಗಳಿಗೂ ಕಾರಣವಾಗಿರುವುದು ಹೊನ್ನು ಹೆಣ್ಣು ಮತ್ತು ಮಣ್ಣುಗಳಲ್ಲ. ನಾವು ಅವುಗಳನ್ನು ಕಾಣುವ ವಿಕಾರ ದೃಷ್ಟಿಯೇ ಎನ್ನುವುದು ಈ ವಚನದ ಸಾರಾಂಶ. ಇದಕ್ಕೆ ಉದಾಹರಣೆ ಹೀಗೆ ಹೇಳಬಹುದು. ಕಟ್ಟುನಿಟ್ಟಾಗಿ ಪಥ್ಯವನ್ನು ಪಾಲಿಸುವ ಸಕ್ಕರೆ ವ್ಯಾಧಿಸ್ಥನ ಮುಂದೆ ಸಿಹಿತಿಂಡಿಗಳನ್ನು ತಂದು ಸುರಿಸಿದರೂ ಅವನು ಅವುಗಳನ್ನು ನಿಷ್ಠುರವಾಗಿ ತಿರಸ್ಕರಿಸಿ ಬಿಡುತ್ತಾನೆ. ಆದರೆ ಕಟ್ಟುನಿಟ್ಟಾಗಿ ಪಥ್ಯವನ್ನು ಪಾಲಿಸಿದ ಸಕ್ಕರೆ ವ್ಯಾಧಿಸ್ಥನ ಮುಂದೆ ಸಿಹಿತಿಂಡಿಗಳನ್ನು ತಂದು ಸುರಿಸಿದಾಗ ಅವನ ಮನಸ್ಸು ಉಯ್ಯಾಲೆಯಂತೆ ತೊಳಲಾಡುತ್ತದೆ. ಸಿಹಿತಿಂಡಿಗಳನ್ನು ತಿಂದರೆ ರೋಗ ಹೆಚ್ಚಾಗಬಹುದೆಂಬ ಭಯ ಒಂದು ಕಡೆ. ಸಿಹಿತಿಂಡಿಗಳನ್ನು ತಿನ್ನದೆ ಬಿಡುವುದು ಹೇಗೆ ಎಂಬ ನಾಲಗೆಯ ಚಪಲ ಮತ್ತೊಂದು ಕಡೆ. ಕೊನೆಯಲ್ಲಿ ನಾಲಗೆಯ ಚಪಲಕ್ಕೆ ಅವನ ಮನಸ್ಸು ಸೋಲುತ್ತದೆ. ಇಂದ್ರಿಯ ಸುಖಕ್ಕಾಗಿ ಅವನ ಮನಸ್ಸಿನಲ್ಲಿ ಉಂಟಾಗುವ ಚಂಚಲತೆಯೇ ಆಶೆ ಅಥವಾ ಮಾಯೆ ಎಂದೆನಿಸಿಕೊಳ್ಳುತ್ತದೆ. ಇಲ್ಲಿ ಚಂಚಲತೆಗೆ ಕಾರಣವಾಗಿರುವುದು ನಿಜವಾಗಿಯೂ ಸಿಹಿತಿಂಡಿಗಳಲ್ಲ. ಸಿಹಿತಿಂಡಿಗಳ ಬಗ್ಗೆ ಅವನಿಗಿರುವ ಪೂರ್ವಗ್ರಹ ಪೂರಿತವಾದ ಪ್ರವೃತ್ತಿ. ಈ ರೀತಿಯಲ್ಲಿಯೇ ಹೊನ್ನನ್ನು ಕಂಡೊಡನೆ ಲೋಭಿಯ ಮನಸ್ಸಿನಲ್ಲಿ ಚಂಚಲವೇರ್ಪಡುತ್ತದೆ. ಹೆಣ್ಣನ್ನು ಕಂಡೊಡನೆ ಕಾಮುಕನ ಮನಸ್ಸಿನಲ್ಲಿ ಚಂಚಲವೇರ್ಪಡುತ್ತದೆ. ಗಂಡನ್ನು ಕಂಡೊಡನೆ ಕಾಮುಕ ಹೆಣ್ಣಿನ ಮನಸ್ಸಿನಲ್ಲಿ ಚಂಚಲವೇರ್ಪಡುತ್ತದೆ. ಸ್ಥಾನಮಾನಗಳನ್ನು ನೆನೆದೊಡನೆ ಅಧಿಕಾರಶಾಹಿಯ ಮನಸ್ಸಿನಲ್ಲಿ ಚಂಚಲವೇರ್ಪಡುತ್ತದೆ ರಾಜ್ಯದಾಹ ತೋರಿದೊಡನೆ ಸಾಮ್ರಾಜ್ಯಶಾಹಿಯ ಮನಸ್ಸಿನಲ್ಲಿ ಚಂಚಲವೇರ್ಪಡುತ್ತದೆ. ಈ ರೀತಿ ಮನಸ್ಸಿನ ಚಂಚಲತೆಯೇ ಸಕಲವಿಧ ದುಃಖದುಮ್ಮಾನಗಳಿಗೆ ಕಾರಣ ಎನ್ನುವುದೇ ಅಲ್ಲಮನು ಕಂಡ ಸತ್ಯಸಂಗತಿ.

ದುಃಖದಿಂದ ಪಾರಾಗಿ ಸದಾ ಸುಖವಾಗಿರಬೇಕೆಂಬುದೇ ಜಗತ್ತಿನಲ್ಲಿರುವ ಎಲ್ಲ
ಾನವರ ಆಶೆ. ಆ ಆಶೆ ಸ್ವಾಭಾವಿಕವಾದದ್ದೇ, ನ್ಯಾಯಬದ್ಧವಾದದ್ದೇ, ಇದರಲ್ಲಿ
ೂವ ದೋಷವನ್ನು ಯಾರೂ ಕಾಣಲಾಗದು. ಆದರೆ ಈ ಆಶೆಯನ್ನು ಈಡೇರಿಸಿ
ೂಳ್ಳುವ ಸಂದರ್ಭದಲ್ಲಿ ಪ್ರಮಾದ ಒದಗಿ ಇತರರಿಗೆ ದುಃಖವಾದಾಗ ಮಾತ್ರ ಅದು
ಟ್ಟದ್ದಾಗುತ್ತದೆ. ತಮ್ಮ ಸುಖಕ್ಕಾಗಿ ಅನ್ಯರಿಗೆ ದುಃಖವುಂಟುಮಾಡುವ ಮನುಷ್ಯನ
ನಸ್ಸಿನ ಇಂತಹ ಆಶೆಯೇ ಜನಸಾಮಾನ್ಯರ ಭಾಷೆಯಲ್ಲಿ 'ದುರಾಶೆ' ಎಂದೆನಿಸಿ
ೂಳ್ಳುತ್ತದೆ. ವೇದಾಂತದ ಮತ್ತು ಶೈವ ಸಿದ್ಧಾಂತದ ಪರಿಭಾಷೆಯಲ್ಲಿ 'ಮಾಯೆ'
ಂದೆನಿಸಿಕೊಳ್ಳುತ್ತದೆ. ವೈಚಾರಿಕ ದೃಷ್ಟಿಯಲ್ಲಿ ಇದು 'ಸ್ವಾರ್ಥ' ಎಂದು ಕರೆಸಿ
ೂಳ್ಳುತ್ತದೆ.

ಆಶೆ ಅಥವ ಮಾಯೆ ಎನ್ನಲ್ಪಡುವ ಈ ಪೈಶಾಚಿಕ (ಸ್ವಾರ್ಥ) ಪ್ರವೃತ್ತಿ ಮನು
ೃರ ಮನಸ್ಸಿನಲ್ಲಿ ಹುದುಗಿರುವ ಒಂದು ದೈವವಿರೋಧಿ ಶಕ್ತಿ. ಶಿಲಾಯುಗ ಕಳೆದು
ಾನವ ಕುಲ ನಾಗರೀಕತೆ ಪಡೆದ ಕಾಲದಿಂದ ಈ ಅಣುಯುಗದವರೆಗೂ ವಿಶ್ವ ಇತಿ
ಾಸದಲ್ಲಿ ನಡೆದುಬಂದಿರುವ ಮತ್ತು ಇನ್ನು ಮುಂದುವರೆಯುತ್ತಿರುವ ಘರ್ಷಣೆ,
ೋಷಣೆ, ಹತ್ಯಾಕಾಂಡ, ಅತ್ಯಾಚಾರ, ಭ್ರಷ್ಟಾಚಾರ ಮೊದಲಾದ ಅನರ್ಥ
ಂಭವಗಳಿಗೆಲ್ಲಾ ಕಾರಣವಾಗಿರುವುದು ಮಾಯೆ (ಆಶೆ ಅಥವಾ ಸ್ವಾರ್ಥ) ಎಂದೆನಿಸಿ
ೂಳ್ಳುವ ಈ ಪೈಶಾಚಿಕ ಪ್ರವೃತ್ತಿಯೇ ಹೊರತು ಬೇರಲ್ಲ. ಮಾನವತೆಗೆ ಮಾರಕ
ಕ್ತಿಯಾಗಿರುವ ಈ ಮಾಯೆ ಅಥವಾ ಆಶೆಯೆಂಬ ಸ್ವಾರ್ಥವನ್ನು ತೊರೆಯುವುದೇ
ಜವಾದ ಸಂನ್ಯಾಸ. ಹಾಗೆ ಅದನ್ನು ತೊರೆದವನೇ ನಿಜವಾದ ಸಂನ್ಯಾಸಿ. ಈ
ಾಯೆ ಅಥವ ಆಶೆಯೆಂಬ ಸ್ವಾರ್ಥವನ್ನು ಹೊಡೆದೋಡಿಸಿಯೇ ವರ್ಧಮಾನ
ಮಹಾವೀರ'ನೆನಿಸಿಕೊಂಡ ಸಿದ್ಧಾರ್ಥ 'ಬುದ್ಧ'ನೆನಿಸಿಕೊಂಡ, ಏಸುವು 'ದೇವ
ುಮಾರ'ನೆನಿಸಿಕೊಂಡ, ಮಹಮ್ಮದ 'ಪೈಗಂಬರ'ನೆನಿಸಿಕೊಂಡ, ಅಲ್ಲಮನು 'ಪ್ರಭು
ೇವ'ನೆನಿಸಿಕೊಂಡ, ನರೇಂದ್ರನು 'ಸ್ವಾಮಿ ವಿವೇಕನಂದ'ನೆನಿಸಿಕೊಂಡ, ಕರಮ
ಂದ ಗಾಂಧಿಯು 'ಮಹಾತ್ಮ ಗಾಂಧಿ' ಎನಿಸಿಕೊಂಡರು. ಮಾಯೆ ಅಥವ ಆಶೆ
ಂಬ ಸ್ವಾರ್ಥ ಪ್ರವೃತ್ತಿಯನ್ನು ಮನುಷ್ಯರ ಮನಸ್ಸಿನಿಂದ ಮೂಲೋತ್ಪಾಟನೆ ಮಾಡ
ೇಕೆನ್ನುವುದೇ ಜಗತ್ತಿನ ಎಲ್ಲ ಧರ್ಮಗಳ ಮತ್ತು ಎಲ್ಲ ಧರ್ಮ ಗ್ರಂಥಗಳ ಜೀವ
ೀವಾಳ. ಇದೇ ಎಲ್ಲಾ ಮಹಾಪುರುಷರ, ಸುಧಾರಕರ ಮತ್ತು ವಿಚಾರವಾದಿಗಳ
ೂಲಭೂತಧ್ಯೇಯ. ●

# ಸಾವು ಗೆಲ್ಲಲು ಸಾಧ್ಯವೆ?

—ಪ. ರಾಮಕೃಷ್ಣಶಾಸ್ತ್ರಿ
"ಶಿವಶಕ್ತಿ ನಿಲಯ", ಅಂಚೆ: ಮಚ್ಚಿನ, 4295 (ದ.ಕ.)

ಅಮೇರಿಕದಲ್ಲಿ "ಪುನರುಜ್ಜೀವನ ವಿಸ್ತರಣ ಸಂಘ" ಎಂಬ ಸಂಸ್ಥೆಯೊಂದನ್ನು ಕಟ್ಟಿಕೊಳ್ಳಲಾಗಿದೆ. ಅದರ ಅಧ್ಯಕ್ಷರು ಎಸ್. ಕೂಪರ್, ಈ ಸಂಘದ ಸದಸ್ಯರು ಸತ್ತವರನ್ನು ಕಾದಿರಿಸಿ ಎಂದಾದರೊಂದು ದಿನ ಮತ್ತೆ ಅವರನ್ನು ಬದುಕಿಸಿಕೊಳ್ಳಬಹುದೆಂಬ ಆಶಾಭಾವನೆಯುಳ್ಳವರಾಗಿದ್ದಾರೆ. ೧೨-೧-೧೯೬೭ ರಂದು ಮೃತರಾದ ಕೆಲಿಫೋರ್ನಿಯದ ಡಾ. ಜೇಮ್ಸ್ ಬೆಡ್‌ಫರ್ಡ್ ಭವಿಷ್ಯದಲ್ಲಿ ಕ್ಯಾನ್ಸರಿಗೆ ಪರಿಣಾಮಕಾರಿಯಾದ ಔಷಧವನ್ನು ಕಂಡುಹಿಡಿದಾಗ ತನ್ನ ಶರೀರವನ್ನು ಪುನರುಜ್ಜೀವನಗೊಳಿಸಬೇಕೆಂದು ಆಶಿಸಿದ್ದರು. ಆತ ಮರಣ ಹೊಂದಿದ ಕೂಡಲೇ ಹೃದಯದ ಮಾಲೀಸು ಹಾಗೂ ಕೃತಕ ಶ್ವಾಸೋಚ್ಛ್ವಾಸದಿಂದ ರಕ್ತ ಸಂಚಾರವನ್ನು ಪ್ರಚೋದಿಸಿ ಮಿದುಳನ್ನು ತಕ್ಷಣ ಸಾಯದಂತೆ ರಕ್ಷಿಸಲಾಯಿತು. ಬಳಿಕ ದ್ರವರೂಪೀ ನೈಟ್ರೋಜನಿನಿಂದ ಶವವನ್ನು ಶೀತಲಗೊಳಿಸಲಾಯಿತು. ಒಂದು ಪೀಪಾಯಿಯಲ್ಲಿ ಆ ದೇಹ ೨೨ ಡಿಗ್ರಿ ಸೆಂಟಿಗ್ರೇಡಿನಷ್ಟು ಅತಿ ಶೀತಲಾವಸ್ಥೆಗೊಳಗಾಗಿ ಭವಿಷ್ಯವನ್ನು ಎದುರು ನೋಡುತ್ತಾ ಮಲಗಿದೆ. ಜೊತೆಗೆ ವಿಜ್ಞಾನದ ಈ ಒಂದು ಅದ್ಭುತವಾದ ಪ್ರಯೋಗಕ್ಕಾಗಿ ೪೦ ಲಕ್ಷ ಡಾಲರುಗಳನ್ನು ಕಾದಿರಿಸಲಾಗಿದೆ.

ಇತ್ತೀಚೆಗೆ ಅತಿ ಶೈತ್ಯೀಕರಣದಲ್ಲಿ ಕೆಲವು ಜೀವಿಗಳನ್ನು ಜೀವಿಗಳ ಅಂಗಾಂಗಗಳನ್ನು ಕಾದಿಡುವ ಪ್ರಯೋಗಗಳು ಸಫಲವಾಗುತ್ತಿರುವಂತೆಯೇ ಈ ಪ್ರಯೋಗಗಳೂ ಆಶಾದಾಯಕವಾಗಿವೆ. ಡಾ. ಬೆಡ್‌ಫರ್ಡರ ಈ ಆಶೆಗೆ ಮೂಲಕಾರಣ ಭೌತಶಾಸ್ತ್ರಾಧ್ಯಾಪಕ ರಾಬರ್ಟ್ ಎಂಟಿಗರ್ ಬರೆದ "ದಿ ಪ್ರಾಸ್ಪೆಕ್ಟ್ ಆಫ್ ಇಮ್ಮಾರ್ಟ್ಯಾಲಿಟಿ" ಎಂಬ ಗ್ರಂಥ. ಭವಿಷ್ಯತ್ತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯನ್ನೂ ಹೀಗೆ ಶೈತ್ಯೀಕರಣದಲ್ಲಿ ಕಾದಿಡಲು ಕೇವಲ ೫೦ ಡಾಲರು ವೆಚ್ಚ ಸಾಕೆಂದು ಅವರು ತಿಳಿಸಿದ್ದರು. (ಈಗ ಅದಕ್ಕಾಗಿ ೬೦ ಸಾವಿರ ಡಾಲರು ಬೇಕಾಗುತ್ತದೆ) ಅಮೇರಿಕದಲ್ಲಿ ಈ ಮೃತ ದೇಹಗಳನ್ನು ಕಾದಿಡಲು ಥರ್ಮಾಸ್ ಪೀಪಾಯಿಗಳನ್ನು ತಯಾರಿಸಲಾಗುತ್ತದೆ. ದೇಹಗಳನ್ನು ಅದರಲ್ಲಿಡುವ ಮುನ್ನ ರಕ್ತ ಹೆಪ್ಪುಗಟ್ಟದಂತೆ ಹೆಪಾರಿನ್ ಇಂಜೆಕ್ಷನ್ ನೀಡಿ ಮಂಜುಗಡ್ಡೆಯಿಂದ ಶೈತ್ಯೀಕರಣಗೊಳಿಸಲಾಗುತ್ತದೆ. ಪೀಪಾಯಿಯಲ್ಲಿ ೧೦೫ ಡಿಗ್ರಿ ಸೆಂಟಿಗ್ರೇಡಿನಲ್ಲಿರುವ ನೈಟ್ರೋಜನ್ ೫೦೦ ಲೀಟರಿನಷ್ಟಿದೆ. ಈ ನೈಟ್ರೋಜನ್

ನಿಧಾನವಾಗಿ ಹೊರಗೆ ಬಿದ್ದು ಹೋಗಲು ವಾಲ್ವ್ ಇದ್ದು ಅದು ಶವದ ಒತ್ತಡದಿಂದ ಪೀಪಾಯಿ ಒಡೆಯದಂತೆ ಮಾಡುತ್ತದೆ. ೩ ತಿಂಗಳಿಗೊಮ್ಮೆ ಪೀಪಾಯಿಗೆ ನೈಟ್ರೋಜನ್ ತುಂಬಬೇಕು.

ಸತ್ತವರನ್ನು ಕಾಲಾಂತರದಲ್ಲಿ ಬದುಕಿಸಬಹುದೆಂಬ ಕಲ್ಪನೆಯನ್ನು ವಿಜ್ಞಾನ ಅಲ್ಲಗಳೆದಿಲ್ಲ. ಆದರೆ ಸಾವು ಹೇಗೆ ಸಂಭವಿಸಬಹುದೆಂಬುದೇ ನಿಷ್ಕರ್ಷಿತವಾಗಿ ತಿಳಿಯದಿರುವಾಗ ಇದು ರಭಸದಲ್ಲಿ ಆಗುವ ಮಾತಲ್ಲ. ನೂರರಿಂದ ಇನ್ನೂರು ವರ್ಷದೊಳಗೆ ಇದನ್ನು ಸಾಧಿಸುವ ಭರವಸೆಯೂ ವಿಜ್ಞಾನಿಗಳಿಗಿದೆ. ಅವರು ಸಾವನ್ನು ಜೈವಿಕ ಮತ್ತು ವೈದ್ಯಕೀಯ ಎಂದು ಎರಡಾಗಿ ವಿಂಗಡಿಸಿದ್ದಾರೆ. ಮಿದುಳಿನೊಂದಿಗೆ ಎಲ್ಲಾ ಅಂಗಾಂಗಗಳೂ ಕೊಳೆತುಬರುವ ಸಾವು ಜೈವಿಕವಾದುದು. ಆದರೆ ಉಸಿರು ಸ್ತಬ್ಧವಾಗಿ, ನಾಡಿ ಸ್ಪಂದನರಹಿತವಾಗಿ, ಹೃದಯ ಸ್ತಂಭನಗೊಳ್ಳುವ 'ವೈದ್ಯಕೀಯ ಮರಣ'ಗಳು ಪೂರ್ಣ ಸಾವಲ್ಲ. ಆಶ್ಚರ್ಯಕರ ಘಟನೆಯೆಂಬಂತೆ ಹೀಗೆ ಸತ್ತವರು ಮತ್ತೆ ಬದುಕಿಬಿಡುವುದುಂಟು. ಮೆದುಳಿನಲ್ಲಿ ಸಾಕಷ್ಟು ಶುದ್ಧವಾದ ರಕ್ತವಿದ್ದರೆ ಜೀವಧಾರಕ ಅಂಗಾಂಗಗಳು ಸುರಕ್ಷಿತವಾಗಿರುತ್ತವೆ. ಅದರಿಂದಾಗಿ ಸ್ವಲ್ಪವಾದರೂ ಪ್ರಚೋದನೆ ಸಿಕ್ಕಿದೊಡನೆಯೇ ಶರೀರ ತಟ್ಟನೆ ಜೀವಪಡೆಯುತ್ತದೆ. ಪುನರುಜ್ಜೀವನ ವಿಸ್ತರಣ ಸಂಘವು ಸತ್ತ ಸಾಯುತ್ತಲಿರುವ ದೇಹಗಳನ್ನು ಶೈತ್ಯೀಕರಣದಲ್ಲಿರಿಸಿದರೆ ಮುಂದೆ ವೈದ್ಯಶಾಸ್ತ್ರವು ಅವರ ಸಾವಿಗೆ ಕಾರಣವಾದ ವ್ಯಾಧಿ ಅಥವಾ ಅಂಶಕ್ಕೆ ಪ್ರತಿರೋಧಕವನ್ನು ಸಂಶೋಧಿಸಿದರೆ ಆ ಶರೀರವನ್ನು ಬಿಸಿ ಮಾಡಿ ಪುನರುಜ್ಜೀವನಗೊಳಿಸುವ ಆಶಾಭಾವನೆ ಹೊಂದಿದೆ. ಮಿದುಳಿಗೆ ಆಘಾತವಾಗಿದ್ದರೆ ಆ ದೇಹ ಮತ್ತೆ ಬದುಕುವುದು ಅನುಮಾನ.

ಶರೀರಕ್ಕೆ ಜೀವಕಣ ರಕ್ಷಕ ಇಂಜೆಕ್ಷನ್ನನ್ನು ಕೊಡುವುದರಿಂದ ದೇಹದ ಜೀವಕೋಶಗಳು ಬಹುಕಾಲ ಕೆಡದೆ ಉಳಿಯುತ್ತವೆ. ಫ್ರೆಂಚ್ ಮಹಿಳಾ ವಿಜ್ಞಾನಿಯೊಬ್ಬಳು ಕಾದಿರಿಸಿದ್ದ ತನ್ನ ಗಂಡನ ವೀರ್ಯವನ್ನು ಹೀಗೆ ರಕ್ಷಿಸಿಟ್ಟು ಅವನು ಸತ್ತ ಎರಡು ವರ್ಷಗಳ ಬಳಿಕ ಅದರಿಂದ ಗರ್ಭ ತಾಳಿ ಕೃತಕ ಗರ್ಭಾಧಾನ ಕ್ರಮಗಳನ್ನು ಪ್ರಾಣಿಗಳಿಗೆ ಬಳುವಳಿಯಾಗಿತ್ತುದನ್ನು ಇಲ್ಲಿ ಸ್ಮರಿಸಬಹುದು.

ಬ್ಲಾವೆಲಿ, ಹ್ಯಾಮ್‌ಸ್ಟರ್ ವರ್ಗದ ಹಿಮುಕರಡಿಗಳು ಶೀತನಿದ್ರೆಗೊಳಗಾದಾಗ ೫ ಡಿಗ್ರಿ ಸೆಂಟಿಗ್ರೇಡ್ ಶೈತ್ಯದಲ್ಲಿರುತ್ತವೆ. ಪುನರುಷ್ಣೀಕರಣದಿಂದ ಅವು ಮತ್ತೆ ಏಳುತ್ತವೆ. ದೇಹದಲ್ಲಿ ಮಿದುಳು ಬಹು ಸೂಕ್ಷ್ಮವಾದುದು. ಅದಕ್ಕೆ ಕೇವಲ ೪ ನಿಮಿಷ ಕಾಲ ಪ್ರಾಣವಾಯು ಸಿಗದಿದ್ದರೂ ಅದು ಸತ್ತುಹೋಗುತ್ತದೆ. ಮಿದುಳಿಗೆ ಗ್ಲಿಸರಿನ್ ಸೇಕ ನೀಡಿ ೨೦ ಡಿಗ್ರಿ ಸೆಂಟಿಗ್ರೇಡ್ ಶೈತ್ಯದಲ್ಲಿರಿಸಿ ಬಹು ಕಾಲದ ಬಳಿಕ ಬಿಸಿ ನೀಡಿ

ರಿ ಅದು ಮತ್ತೆ ಕಾರ್ಯಾರಂಭಗೊಳಿಸುವುದಲ್ಲದೆ ಎಲ್ಲಾ ನೆನಪು, ಅನುಭವ, ವಿಚಾರ ಕ್ತಿಗಳನ್ನು ಕಾದಿಟ್ಟುಕೊಳ್ಳುವುದೆಂದು ಜಪಾನಿನ ವಿಜ್ಞಾನಿಗಳು ನಾಯಿ ಹಾಗೂ ಕ್ಕಿನ ಶರೀರಗಳ ಮೇಲೆ ನಡೆಸಿದ ಪ್ರಯೋಗಗಳಿಂದ ವ್ಯಕ್ತವಾಗಿದೆ. ಮೆದುಳಿಗೆ ಾನಿಯಾಗಿದ್ದರೆ ದೇಹವೂ ಬದುಕದು.

ಈ ಶೈತ್ಯೀಕರಣ ಸಾಧ್ಯತೆ ಸುಲಭವೆನಿಸಿದರೆ ದಕ್ಷಿಣ ಧ್ರುವದ ಮಂಜುಗಡ್ಡೆಗಳ ಂಹಾರಾಶಿಯಲ್ಲಿ ಹೆಣಗಳನ್ನು ಹೂಳಿಡುವ ಅಂದಾಜಿದೆ. ಈ ರೀತಿ ಮೃತ ಮಹಾ ಕ್ತಿಗಳನೇಕರನ್ನು ಜಾಗರೂಕತೆಯಿಂದ ರಕ್ಷಿಸಿಟ್ಟು ಮುಂದೆ ಅವರ ಸಾವಿಗೆ ಕಾರಣ ಾದ ವ್ಯಾಧಿಗೆ ಸೂಕ್ತ ಔಷಧಿ ಸಂಶೋಧಿಸಲ್ಪಟ್ಟಾಗ ಇವರನ್ನು ಬದುಕಿಸಿಕೊಳ್ಳುವ ಚಾರದೆಡೆಗೆ ವಿಜ್ಞಾನಿಗಳು ಗಮನ ಹರಿಸಿದ್ದಾರೆ. ಶೀತಲೀಕರಣದ ಈ ಪ್ರಯೋಗ ಯಶಸ್ವಿಯಾದರೆ ಸತ್ತವರು ಎದ್ದು ಬರುತ್ತಾರೆ. ಇದು ಮಾರ್ಕಂಡೇಯನ ೃತ್ಯುಂಜಯವಾಗಿದೆ.

---

# ತಳಿರು–ತೋರಣ

**ಸಾಮಾಜಿಕ ಕಿರುಕಾದಂಬರಿ ("ಧಾರಾವಾಹಿಯಾಗಿ") -೧**

—ಎಸ್. ಎಸ್. ಗದಗಕರ
ಶುಕ್ರವಾರ ಪೇಟೆ, ನವಲೂರ ಅಗಸೆ, ಧಾರವಾಡ

ಶ್ರೀಕಾಂತನು ತನ್ನ ಸೋದರತ್ತೆ ಯಶೋದಕ್ಕನ ಊರಾದ ಲಕ್ಷ್ಮಣಪುರಿಗೆ ಬಂದು ಹದಿನೈದು ದಿನಗಳಾದವು. ಇಷ್ಟು ದಿನ ಆಕೆಯ ಮಗಳು ಶಾರದೆಯ ಲಗ್ನದ ಸಡಗರದಲ್ಲಿ ಕಳೆದವು. ಇದೀಗ ಅವರು ತಮ್ಮ ಕುಲದೇವರ ದರ್ಶನಕ್ಕೆಂದು ತಿರುಪತಿ ಯಾತ್ರೆ ಕೈಕೊಂಡಿರುವರು. ಹೋಗಿ ಎರಡು ದಿನಗಳಾದವು, ಇನ್ನೂ ಕನಿಷ್ಟ ನಾಲ್ಕಾರು ದಿನಗಳಂತೂ ಬೇಕು ಅವರು ಬರಲು. ತುಂಬಿದ ಮನೆಯನ್ನು "ಖಾಲಿ" ಬಿಟ್ಟು ಹೋಗಲು ಮನಸ್ಸಾಗದೆ ಅವರು ಶ್ರೀಕಾಂತನನ್ನು "ಕಾವಲು''ಗಾಗಿ ನಿಯಮಿಸಿ ನಿಶ್ಚಿಂತರಾಗಿ ಹೋಗಿರುವರು. ಯಶೋದಕ್ಕನ ಗಂಡ ಕೇಶವರಾಯರು ಉಂಡುಟ್ಟು ಸುಖದಿಂದಿದ್ದವರು. ಮೊನ್ನೆ ಮೊನ್ನೆ ಬ್ಯಾಂಕಿನ ನೌಕರಿಯಿಂದ ನಿವೃತ್ತರಾಗಿರುವರು. ಹೊಲ ಮನೆಯ ಉತ್ಪನ್ನವೂ ಅವರಿಗೆ ವಿಶೇಷ, ಲಕ್ಷ್ಮಿ ಅವರ ಮನೆಯಲ್ಲಿ ಕಾಲು ಕಡಿದುಕೊಂಡು ಬಿದ್ದಿರುವಳೆಂದರೆ ತಪ್ಪಾಗಲಿಕ್ಕಿಲ್ಲ! ಅವರು ಮರಳಿ ಬರುವವರೆಗೆಂದರೆ ಶ್ರೀಕಾಂತನಿಗೆ ಮನೆಯಲ್ಲಿ ಯಾತರ ಕೊರತೆ ಇಲ್ಲ. ನಾಲ್ಕಾರು ದಿನ ಮನೆ "ಬರಿದೊ ಬರಿದೊ ತೆರವೊ ತೆರವೊ" ಅಷ್ಟೆ! ಅಷ್ಟು ಮಾತ್ರ ಅವನು ಸಹಿಸಿಕೊಳ್ಳಬೇಕು. ಮಕ್ಕಳಿಗೆ ದಿನನಿತ್ಯ ಅಭ್ಯಾಸ ಹೇಳುವಲ್ಲಿ ಕುಶಲನಾದ ಅವನು ಏಕಾಂಗಿ ಜೀವನ ನಡೆಸುವುದು ಹೇಗೆಂದು ಕಲಿಯಬೇಕಾಗಿರಲಿಲ್ಲ. ಎಂತೆಂತಹ ಉಡಾಳ, ಉಲಕೋಚಿ ಮಕ್ಕಳನ್ನು ವಶವರ್ತಿಯಾಗಿಟ್ಟುಕೊಳ್ಳುವ ಕಲೆಯನ್ನು ಸಾಧಿಸಿಕೊಂಡ ಅವನಿಗೆ ಈ ಕೆಲ ದಿನ ಕಳೆಯುವುದೇನು ಮಹಾ ಸಮಸ್ಯೆ? ಅಂತೆ ಸಹಜವಾಗಿ ಅವನು ಬುದ್ಧಿಯಕ್ಕಿಂತ ಮನಸ್ಸನ್ನು ಕಲ್ಲುಮಾಡಿ ಅಲ್ಲಿ ನೆಲಸಿರುವನು ಈ ಏಕಾಂಗಿ ಅವಧಿಯಲ್ಲಿ ಅವನು ಊರಲ್ಲಿಯ ಗುಡಿ-ಗುಂಡಾರ, ಪ್ರೇಕ್ಷಣೀಯ ಸ್ಥಳ ಜೀವದ ಗೆಳೆಯರನ್ನು ಸಂದರ್ಶಿಸಿ ಬಂದನು. ಈಗ ಇನ್ನು ನಾಲ್ಕಾರು ದಿನ ನೈಜ ಸತ್ವ ಪರೀಕ್ಷೆಯ ಕಾಲ ಒದಗಿಬಂದಿತು. ಇದೀಗ ಖಾನಾವಳಿಯ ಮಧ್ಯಾಹ್ನದ ಸಮೀಚೀನ ಊಟದನಂತರ ನಿದ್ರೆ ಆಯಿತು. ತಾನೇ ಸ್ಟೋವ್ ಹೊತ್ತಿಸಿ ಚಹಾ ಮಾಡಿಕೊಂಡ ಕುಡಿದ ನಂತರ ನಿನ್ನೆ ಓದಿ ಅರ್ಧಕ್ಕೆ ಬಿಟ್ಟ ಅಲೆಕ್ಸಾಂಡರ ಡ್ಯೂಮಾರ "Black Julips''—ಪ್ರಣಯ ಕಾದಂಬರಿಯನ್ನು ಮುಂದುವರಿಸಬೇಕಿತ್ತು. ದಿನಪತ್ರಿಕೆಯ ಸುದ್ದಿಯನ್ನಂತೂ ಮುಂಜಾವು ಓದಿದ್ದರಿಂದ ಅವು ಹಳಸಿದಂತಾಗಿದ್ದವು. ಹೊರಗ

ವಾಯುಸೇವನೆಗೆಂದು ಹೊರಡಬೇಕೆಂದರೆ, ಅಡ್ಡ ಮಳೆಯ ದಿನ. ಮುಂಜಾವಿನಿಂದ ಇಲ್ಲಿಯವರೆಗೆ ರಣ ರಣ ಬಿಸಿಲು ಹೊಡೆದು ಇದೀಗ ಆಗಸವು ಕಾರ್ಮೋಡಗಳಿಂದ ಆವೃತವಾಗಿರುವದು. ಮಾಡಲು ಬೇರೆ ಕೆಲಸವಿಲ್ಲದೆ ಮೂಲತವಾಗಿ ಸಹಜವಾಗಿ ಶ್ರೀಕಾಂತನ ಮನಸ್ಸು ಗರಿಗೆದರಿದ ಹಕ್ಕಿಯಂತೆ, ಕಾಲಚಕ್ರ ಪಥದಲ್ಲಿ ರಭಸದಿಂದ ಹಿಂದಕ್ಕೆ ಹಾರಿತು. ಸುಮಾರು ನಲವತ್ತು ನಲವತ್ತೈದು ವರುಷ ಹಿಂದಿನ ಅವನ ಜೀವನದ ರಸ ವಿಷ ನಿಮಿಷಗಳು ಚಲಚ್ಚಿತ್ರದ ದೃಶ್ಯಗಳಂತೆ ಮಿಂಚಿಹೋದವು. ಶ್ರೀಕಾಂತನು ವಿಚಾರಪರನಾದನು ಭಾವಜೀವಿಯಂತೆ !.

ಆ ದಿನಮಾನಗಳು ಶ್ರೀಕಾಂತನ ಜೀವಮಾನದಲ್ಲಿ ರೋಮಾಂಚಕವಾದವುಗಳು. ಚಿಂತೆಯ ಚಿಂತೆ ನಸುವೂ ಇಲ್ಲದ ಬಾಲ್ಯಾವಸ್ಥೆಯ ಕಾಲವದು. ಚಿತ್ರದುರ್ಗದಲ್ಲಿ ಅವನು ನೆಲಸಿದ್ದನು. ಅವನ ತಂದೆ ಮೋಹನರಾಯರು ತಾಲ್ಲೂಕು ಕಛೇರಿಯಲ್ಲಿ ಶಿರಸ್ತೇದಾರರು. ಅಂದಮೇಲೆ, ಆಗಿನ ಅವರ ದರ್ಪವನ್ನು ಕೇಳಬೇಕೆ ? ಹಳೆ ಮಾದರಿಯ ವೇಷವಿದ್ದರೂ—ಕೋಟು, ಶರ್ಟ್, ದೋತರ, ರುಮಾಲು ಕಿಮ್ಮತ್ತಿನವು. ಕಾಲಲ್ಲಿ ವಿಜಾಪುರದ ಮೊಚ್ಚೆ, ಕೈಯಲ್ಲಿ ಬೆತ್ತ—ಅಧಿಕಾರದ ದ್ಯೋತಕ ಎಂಬಂತೆ. ಶ್ರೀಕಾಂತನಿಗೆ ಪ್ರಪ್ರಥಮವಾಗಿ ತನ್ನ ಅಕ್ಕ ಯಶೋದಕ್ಕನ ಮದುವೆಯ ಸನ್ನಿವೇಶ ನೆನಪಾಯ್ತು. ಮನೆಯ ಮುಂದೆ ಭವ್ಯ ಹಂದರ ಹಾಕಿದ್ದುದು ಈಗ ಕಣ್ಣೆದುರು ಕಟ್ಟಿತು. ಬೀಗರೊ ? ಉದ್ದಾಮ ಜನ, ಮೋಹನರಾಯರು ಹಿರಿಯ ಮಗಳ ಲಗ್ನವೆಂದು ಹಣವನ್ನು ನೀರಿನಂತೆ ವೆಚ್ಚ ಮಾಡಿದರು. ಆದರೆ ಬೀಗರ ಉಪಟಳ ಹಿಡಿಯಲಾಸಲ್ಲ, ಸಾಕಷ್ಟು ರಸಕಸಿ ಆಯಿತು. ನಡುವೆ ಆದವರು ಹಾವೇರಿ ನ್ಯಾಯದಿಂದ ಎಲ್ಲ ಬಗೆಹರಿಸಿದರು, ಮತ್ತೆ ನೆಮ್ಮದಿ ತಲೆದೋರಿತು. ಗುಡ್ಡದಂತೆ ಬಂದ ಪೇಚುಗಳು ಮಂಜಿನಂತೆ ತೇಲಿಹೋದವು. ಕಛೇರಿಯಲ್ಲಿ ರಾಯರ ದರ್ಪಕ್ಕೆ ಬೆಲೆ ಇದ್ದರೂ ಮಗಳ ಲಗ್ನ ಮುಗಿಯುವವರೆಗೆ ಬೆಕ್ಕಾಗಬೇಕಿತ್ತು! ಅಂದಿನಿಂದಲೇ ಅವರು ತಾಳ್ಮೆಯ ಆದಿ ಪಾಠಗಳನ್ನು ಕಲಿಯತೊಡಗಿದರು. ಪರದೇಶಿ ಮಗಳ ಲಗ್ನವು ಸುಸೂತ್ರವಾಗಿ ನಡೆದುಹೋಯಿತಲ್ಲಾ ಎಂದು ಕೊನೆಗೆ ಮೋಹನರಾಯರು ಸಂತೃಪ್ತಿಯ ನಿಟ್ಟುಸಿರು ಕರೆದರು.

ಮದುವೆ ನಡೆದಾಗೆಲ್ಲ ಆಗೀಗ ಮೋಹನರಾಯರಿಗೆ ಹಳಹಳಿಮೇ ಹಳಹಳಿ. ತಮ್ಮ ಮೂರನೆಯ ಪತ್ನಿ-ಸಾವಿತ್ರಿಬಾಯಿ ಮೊನ್ನೆ-ಮೊನ್ನೆ ಕಣ್ಣು ಮುಚ್ಚಿದುದರ ನೆನಪಾಗುತ್ತಿತ್ತು. ಹಿಂದಿನ ಈರ್ವರಿಂದ ಮಕ್ಕಳಾಗಿರಲಿಲ್ಲ, ಈ ಹದಿನೈದು ಹದಿನಾರು ವರ್ಷಗಳ ಅವಧಿಯಲ್ಲಿ ಅವರಿಗೆ ಮೂವರು ಹೆಣ್ಣು, ಮೂವರು ಗಂಡು ಮಕ್ಕಳಾಗಿದ್ದರು. ಇವನ್ನೆಲ್ಲ ರಾಯರ ಉಡಿಯಲ್ಲಿ ಚೆಲ್ಲಿ ಆಕೆ ಪರಂಧಾಮವನ್ನೈದಿದ್ದಳು. ಈಕೆಯನ್ನು ಹೇಗೊ ಉಳಿಸಿಕೊಳ್ಳಲು ರಾಯರು ಭಗೀರಥ ಸಾಹಸಪಟ್ಟರು. ಹೊಟ್ಟೆ

ನೋವಿನ ದೊಡ್ಡ ಆಪರೇಶನ್ ನಡೆಯಿತು. ಆ ಶಸ್ತ್ರಚಿಕಿತ್ಸೆ ಯಶಸ್ವಿ ಆಯಿತು, ಆದರೆ ಹೋಗಿ ಐದು ದಿನದ ನಂತರ ಬದುಕಲಿಲ್ಲ! ದೀಪಾವಳಿಯ ಕಡೆ ಪಂಚಮಿಯ ಆ ದಿನ ವಿಷಮಯವಾಯ್ತು. ಶ್ರೀಕಾಂತನಿಗೆ ಅದೆಲ್ಲ ಘಟನೆ ಮಸುಕು ಮಸುಕು. ಶಸ್ತ್ರಚಿಕಿತ್ಸೆ ಮಾಡಿದಾಗ ತಾಯಿಯನ್ನು ನೋಡಿದ ನೆನಪಷ್ಟೆ. ಚಿಕ್ಕ ಮಕ್ಕಳಿಗೆ ತಿಳಿಯದಂತೆ ಹೊರಗಿಂದ ಹೊರಗೇ ಸ್ಮಶಾನಕ್ಕೆ ಸಾವಿತ್ರಿಬಾಯಿಯ-ತಾಯಿಯ-ಶವವನ್ನು ಸಾಗಿಸಿದ್ದರು.

ಆಗಿನ ವಿಷ ನಿಮಿಷಗಳಷ್ಟೇ ಶ್ರೀಕಾಂತನ ಮನಸ್ಸಿನಲ್ಲಿ ನೆಲಸಿರಲಿಲ್ಲ. ಅವನು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದ. ಆ ದಿನಗಳು ಉತ್ಸಾಹಭರಿತವಾಗಿದ್ದವು, ಆಗ ಶ್ರೀಕಾಂತನಿಗೆ ಹತ್ತು ವರ್ಷಗಳಿದ್ದಿದ್ದಾವು. ಮೋಹನರಾಯರಿಗಂತೂ ಆಗ ಏರು ಜವ್ವನ, ಮೇಲೆ ನೌಕರಿಯ ದರ್ಪ. ಊರಿಗೆ ನಾಟಕ ಕಂಪನಿಗಳು ಬಂದರೆ ಮನೆಯಲ್ಲಿ ಸಂಭ್ರಮವೇ ಸಂಭ್ರಮ. ಮೋಹನರಾಯರೇ ಆ ಕಂಪನಿಯ ಪ್ರಯೋಗಗಳು ನಡೆಯುವದಕ್ಕೆ "ಲೈಸೆನ್ಸ್" ಕೊಡಿಸುವವರು. ಆ ಕಂಪನಿಗಳ ಒಡೆಯರ ಗಾಢ ಪರಿಚಯವು ರಾಯರಿಗೆ ಸಹಜವಾಗಿ ಆಗುತ್ತಿತ್ತು. ನಾಟಕ ನೋಡಲು ಬನ್ನಿರೆಂದು ಅವರು ದುಂಬಾಲು ಬೀಳುವರು. ಯಾವಾಗದರೊಮ್ಮೆ ರಾಯರು ಹೋಗುತ್ತಿದ್ದರೂ ಶ್ರೀಕಾಂತನಿಗೆ ಮಾತ್ರ ಅನೇಕ ಸಲ ಅವನ್ನು ನೋಡುವ ಸಂಧಿಗಳು ದೊರೆಯುತ್ತಿದ್ದವು. ಆ "ಭಕ್ತ ಪ್ರಹ್ಲಾದ", "ಮಹಾನಂದಿ", "ಲಂಕಾದಹನ"—ನಾಟಕಗಳು ಅವನ ಸ್ಮೃತಿಮಂದಿರದಲ್ಲಿ ಉಳಿದು ಈಗಲೂ ಅಳಿಸಿಹೋಗಿರಲಿಲ್ಲ. ಶ್ರೀಕಾಂತನ ತಂದೆ ಮೋಹನರಾಯರೂ ಉದಾರ ಹೃದಯಿಗಳು, ರಸಿಕರು. ಒಳ್ಳೆ ಪಾರ್ಟುದಾರರಿಗೆ ಚಿಕ್ಕ ಪುಟ್ಟ-ನಗದು ಹಣದ-ಬಹುಮಾನಗಳನ್ನು ಆಗೀಗ ಕೊಡಮಾಡುತ್ತಿದ್ದರು. ನಾಟಕ ನಿರೀಕ್ಷಿಸಿದ ಶ್ರೀಕಾಂತನ ಸೋದರ, ಸೋದರಿಯರು ಮನೆಗೆ ಬಂದು ಅವುಗಳನ್ನೇ ಆಡುತ್ತಿದ್ದರು. ಮನೆಯ ಕಿಟಕಿಯಿಂದ ಕೆಳಗೆ ಹಾರುವದು-ಹನುಮಂತನ ಲಂಕಾಪ್ರವೇಶ. ತೆರೆ ಎಂದರೆ ಹೊದ್ದುಕೊಳ್ಳುವ ಚಾದರ, ಪಾಪ! ಆಗ ಚಲಿಸುವ ರಂಗಮಂಚದ ಕಲ್ಪನೆ ಇರಲಿಲ್ಲ. ಆದರೆ ಹಾರಿ ಮದ್ದು, ಟ್ರಾನ್ಸ್‌ಫರ ಸೀನುಗಳಿಗೆ ಕೊರತೆ ಇರಲಿಲ್ಲ. ಒಟ್ಟು ಅದೊಂದು ಯಕ್ಷಿಣಿ ಲೋಕ!.

ಇಂತಹ ಸುಖದ ದಿನಗಳ ಮಧ್ಯೆ ವಿರಸವೂ ಆಗೀಗ ತಲೆದೋರುತ್ತಿತ್ತು. ಮೋಹನರಾಯರ ತಂಗಿ ರಾಮಕ್ಕ ಮುರುಳೀಧರರಾಯರೊಡನೆ ಲಗ್ನವಾಗಿ ಚಿತ್ರದುರ್ಗದಲ್ಲಿಯೆ ಶ್ರೀಕಾಂತ ವಾಸಿಸುವ ಓಣಿಯಲ್ಲಿ ಇರುತ್ತಿದ್ದಳು. ಮುರುಳೀಧರರಾಯರು ಮುನಸಿಪಾಲ್ಟಿಯ ಕಾರಕೂನರು, ಬಲು ಸಂಭಾವಿತರು. ಅಂತೇ ಅಣ್ಣನೊಡನೆ ಹೊಲಮನೆಯ ವ್ಯಾಜ್ಯದಲ್ಲಿ ಬಹಳ ಹಾನಿಗೀಡಾಗಿದ್ದರು. ಮೋಹನರಾಯರೇ ತಂಗಿಯ ಸಂಸಾರನ್ನು "ವೈನಾಗಿ" ಮಾಡಿಕೊಡಲು ಹವಣಿಸಿದರು. ಬಹು

ಬಟ್ಟೆಗೆ ಯಶಸ್ವಿ ಆದರು. ಆದರೆ ರಾಮಕ್ಕನಿಗೆ ನಿರಂತರ ಭೂತಬಾಧೆ ಗಂಟುಬಿದ್ದಿತು. ಕೆ ತಾಸೆರಡು ತಾಸು ಚೀರಾಡುತ್ತಿದ್ದಳು, ಬಡಬಡಿಸುತ್ತಿದ್ದಳು, ನಗುತ್ತಿದ್ದಳು, ಳುತ್ತಿದ್ದಳು, ಹಾಡುತ್ತಿದ್ದಳು, ತಲೆಯುತ್ತಿದ್ದಳು. ದೇವ್ವ ಬಂದಾಗ ತಮ್ಮ ಹೊಲ ರುವ ಹೊಸೂರಿಗೆ ರಾತ್ರೋ ರಾತ್ರಿ ಹೋಗಿಬರುತ್ತಿದ್ದಳು ಏನೋ ಕೆಲಸ ಮಾಡುವ ಸದಿಂದ. ಆಕೆಯ ದೆವ್ವ ಬಿಡಿಸಲು ನಡೆದ ಯತ್ನಗಳೆಷ್ಟೊ! ಹಣವೂ ಸಾಕಷ್ಟು ಾಳಾಯ್ತು. ಕಾಲಕ್ರಮದಲ್ಲಿ ಅದು ತಾನಾಗಿಯೇ ವಾಸಿ ಆಯಿತು.

ಶ್ರೀಕಾಂತನ ಮನಸ್ಸಿನ ಮೇಲೆ ಆ ಬಾಲ್ಯದ ದಿನಮಾನದಲ್ಲಿ ಇನ್ನೊಂದು ದೆವ್ವದ ದೃಶ್ಯ ಭೀಕರ ಪರಿಣಾಮ ಬೀರಿತು. ಅದು ತನ್ನ ತಾಯಿ ಸಾವಿತ್ರಿಬಾಯಿ ುದು. ಕೆ ಮಧ್ಯ ವಯಸ್ಸಿನಲ್ಲಿ ಮಕ್ಕಳು ಮರಿಗಳನ್ನು ಬಿಟ್ಟು ತೀರಿಕೊಂಡದ್ದರಿಂದ "ವಾಸನಾ" ಉಳಿದು ಆಕೆ ದೆವ್ವವಾಗಿದ್ದಳು. ಈಗಿನ ನವ ಮನ್ವಂತರದಲ್ಲಿ "ಹಿಸ್ಟೆ ಯಾ" ಎಂದು ಅದಕ್ಕೆ ಹೆಸರಿಸಿದರೂ ಆಗ ಮಾತ್ರ ಶ್ರೀಕಾಂತನ ತಾಯಿ, ತನ್ನ ತ್ತೆ ರಾಮಕ್ಕನಿಗೆ ಬಡಿದುಕೊಂಡಿದ್ದಳು. ಆಕೆಯ ಒದರಾಟ, ಚೀರಾಟ. ರಕ್ಕಸ ನಗಳು ಶ್ರೀಕಾಂತನ ಮೃದು ಮನಸ್ಸಿನ ಮೇಲೆ ಆಘಾತವನ್ನುಂಟುಮಾಡುವವು. ಕ್ಷತನ ಅವನನ್ನಾವರಿಸಿತು. ಈಗ ಅವನು ದೊಡ್ಡವನಾಗಿ ಜೋಡು ಪದವೀ ರನಾಗಿ ಶಿಕ್ಷಕ ವೃತ್ತಿ ಅವಲಂಬಿಸಿದ್ದರೂ, ಅದರಲ್ಲಿಯೇ ಒಳ್ಳೆ ಗತಿ ಸಾಧಿಸಿದ್ದರೂ ಶೇಷ ಎದೆಗಾರಿಕೆ ಇಲ್ಲ. ಎಲ್ಲಕ್ಕೂ ಕಾರಣ ಮನೆಯಲ್ಲಿಯ ಹಿಂದಿನ ಭೂತ ಾಧೆಯ ಹಾವಳಿ!

ಚಿತ್ರದುರ್ಗದಿಂದ ಮೋಹನರಾಯರು ಮಧುಗಿರಿಗೆ ವರ್ಗವಾಗಿ ಬಂದಾಗ ವರು ವಿಧುರರೇ ಆಗಿದ್ದರು. ಆರು ಮಕ್ಕಳಿರುವಾಗ ನಾಲ್ಕನೆಯ ಸಲ ಮದುವೆ ಾಗುವ ವಿಚಾರವನ್ನು ಬಿಟ್ಟುಕೊಟ್ಟರು. ಹಾಗೆ ನೋಡಿದರೆ, ಅವರಿಗೆ ಆಗ ೇವಲ ನಲವತ್ತೈದು ವರ್ಷ. ಮಕ್ಕಳನ್ನೇ ಒಳ್ಳೆ ದಾರಿಗೆ ಹಚ್ಚುವ ಯೋಚನೆ ಾಡ ಹತ್ತಿದರು. ಎರಡನೆಯ ಮಗಳು ವಿಮಲೆಯ ಲಗ್ನದ ವಿಚಾರ ಮಾಡಿದರು. ಂಗಿ ಭಾರತೀಬಾಯಿಯ ಮಗ ಕೃಷ್ಣಮೂರ್ತಿಯೊಡನೆ ಲಗ್ನ ನಿಶ್ಚಯವಾಯಿತು. ಭಾರತೀಬಾಯಿ ದುರ್ದೈವಿ ವಿಧವೆ. ಗಂಡ ಹೈದರಾಬಾದಿನಲ್ಲಿ ಪದವೀಧರ ಆದ ಂತರವೇ ಮಾಮಲೇದಾರರಾಗಿದ್ದರು. ಬೇಕಾದಷ್ಟು ಸಿರಿವಂತಿಕೆ ಇದ್ದಿತು. ದರೆ ಕ್ಷಯ ರೋಗದ ಮೂಲಕ ಅಕಾಲಿತ ಮರಣಕ್ಕೆ ತುತ್ತಾದರು. ಅಣ್ಣ ಮ್ಮಂದಿರಲ್ಲಿ ಅವರ ಹಿರಿ ಆಸ್ತಿ ಹರಿದು ಹಂಚಿ ಹೋಗಿ ಮನೆತನ ಮಾರು ಬಜ್ಜಿ ಯಿತು. ಕೇವಲ ವರ್ಷಕ್ಕೆ 2-5 ನೂರು ರೂಪಾಯಿ ಉತ್ಪನ್ನ ಬರುವ ಹೊಲ ಷ್ಟೆ ಉಳಿಯಿತು. ಅನಂತರ ಸ್ವಂತ ಗಳಿಕೆಯ ಸಾವಿರಾರು ರೂಪಾಯಿ ಅಷ್ಟೆ! ದರೆ ತಂಗಿ ರಾಯರ ಕೊರಳಿಗೆ ಬಿದ್ದಳು ಕೊನೆಯವರೆಗೂ!

ಸರಿ. ಕೃಷ್ಣಮೂರ್ತಿಯ ಶಿಕ್ಷಣ ಶಕಟವಾದರೂ ಸುಸೂತ್ರವಾಗಿ ಮುಂದು ವರಿದೀತೇನೊ ಎಂದು ಸಮಾಧಾನ ಹಚ್ಚಿಕೊಳ್ಳುವಂತಿರಲಿಲ್ಲ. ಅದು ಒ ಗ್ಗಾ ಲಿ ಯಾಗಿ ನಿಂತಿತು. ಮುಖ್ಯವಾಗಿ ಇಂಗ್ಲೀಶ್, ಗಣಿತ ವಿಷಯಗಳು ಅವನಿಗೆ ಪ್ರೌಢ ಶಾಲೆಯಲ್ಲಿ ಕೈ ಕೊಟ್ಟವು. ಮನೆಯಲ್ಲಿ ಎಲ್ಲರ "ಅಚ್ಚೆ"ಯ ಮೂಲಕ ಪರದೇಶಿ ಎಂದು ಅಲಕ್ಷ್ಯವಾಯಿತು. ಅರ್ಧ ಮರ್ಧ ಉಡಾಳರ, ನಿರುದ್ಯೋಗಿಗಳ ಗೆಳೆತನವಾಯಿತು. ನಾಟಕ ಕಂಪನಿಯ ನಾದ ಹತ್ತಿತು. ಪೇಟಿ, ತಬಲಾ ಬಾರಿ ಸುವ ಕಲೆಯನ್ನು ಅವನು ಕೆಲ ಮಟ್ಟಿಗೆ ವೈಗೂಡಿಸಿಕೊಂಡನು. ವರು ವರು ಷವೂ ಮೊಗಲಾಯಿಯಿಂದ ಹೊಲದ ಉತ್ಪನ್ನ ತರುತ್ತಿದ್ದನು. ಅರೆ ವಿಲಾಸ್‌ದಲ್ಲಿ ದಿನಮಾನ ಕಳೆದವು.

ಶ್ರೀಕಾಂತನಿಗೆ ಮಧುಗಿರಿಯು ಬಹಳ ಮೆಚ್ಚುಗೆಯದಾಗಿತ್ತು. ಅದು ಅಂದ ವಾದ ನಗರಿ. ಊರ ಪಶ್ಚಿಮದಂಚಿನಲ್ಲಿ ಕೆಂಪು ಲಾಲಾದ ಗುಡ್ಡ. ಅದು ನವಿಲು ಗಳ, ಪಾರಿವಾಳಗಳ ಆಗರ. ಊರ ಇನ್ನೊಂದು ಬದಿಗೆ ವೆಂಕಪ್ಪನ ಸುರಮ್ಯ ದೇವಾ ಲಯ. ಮತ್ತೊಂದು ದಿಕ್ಕಿಗೆ ದಿನ್ನೆಯ ಮೇಲೆ ಹನುಮಂತ ದೇವರ ದೇವಸ್ಥಾನ ಮಧ್ಯವರ್ತಿ ಬಯಲಲ್ಲಿ ನಗರಿಯು ಇದೀಗ ವಿರಮಿಸಿದ ಸಿಂಹಿಣಿಯಂತಿದ್ದಿತು! ಊರ ತಟಾಕ ಶೋಭಾವಹವಾಗಿತ್ತು. ಪಶ್ಚಿಮ ವಲಯದ ಗಣಪತಿಯ ಗುಡಿ ಬಲು ಮಾಟ ದೇವರು ಒಳ್ಳೆ ಜಾಗ್ರತ, ಅದಕ್ಕೆ ಪ್ರತಿ ಮಂಗಳವಾರ ನಡೆದುಕೊಳ್ಳದ ಭಕ್ತರೇ ವಿರಳ ಊರ ಮಧ್ಯದ ಕಾಳಭೈರವನ ದೇವಸ್ಥಾನದೆದುರಿನ ಬಯಲು ಹುಲ್ಲುಗಾವಲು, ಮ ಗಾಲದಲ್ಲಿ ಅದು ಮಕ್ಕಳಿಗೆ ಆಡುಂಬೊಲ. ಅಲ್ಲಿಯೆ ಎಂಟು ಹತ್ತು ವರ್ಷ ಶ್ರೀಕಾಂತನು ಸಮವಯಸ್ಕ ಹೆಣ್ಣು ಗಂಡು ಹುಡುಗರೊಡನೆ ಉಸಕಿನಿಂದ ಗುಬ್ಬಿ ಗೂಡು ಕಟ್ಟುತ್ತಿದ್ದ, ಜಾಲಿಯ ಗಿಡಗಳಲ್ಲಿಯ ಭೋರಂಗಿ ಹಿಡಿದು ಕಡ್ಡಿಪೆಟ್ಟಿಗೆಯಲ್ಲಿ ಹಾಕಿಡುತ್ತಿದ್ದ. ಊರ ಗುಡಿಗಳಿಗೆ ಹೋಗುವುದಂತೂ ವಿಲಕ್ಷಣ ಸಂಭ್ರಮ ಕಾರ್ತಿಕ ಮಾಸದಲ್ಲಿ ಹನುಮಂತದೇವರ ಗುಡಿ ಉತ್ಸಾಹದಾಗರವಾಗಿರುತ್ತಿತ್ತು. ನ ರಾತ್ರಿಯಲ್ಲಿ ವೆಂಕಪ್ಪನ ತೇರು, ಕಕ್ಕಡಾರತಿ ತಪ್ಪದೆ ನಡೆಯುತ್ತಿದ್ದವು. ಊರ ಕೋಟೆಯ ಮುಂದಣ ಬಯಲು– ಕಾರ ಹುಣ್ಣಿವೆ ಕರಿ, ಕುಸ್ತಿಗಳಿಗೆ ಮೀಸಲು. ಆ ಗೆದ್ದವರಿಗೂ ಸೋತವರಿಗೂ ಕೂಡಿಯೇ ಬಹುಮಾನ ಹಂಚುವ ಉತ್‌ಶ್ರಾಯ ಕಾಲ

ಕೃಷ್ಣಮೂರ್ತಿಯ ಲಗ್ನದ ನೆನಪು ಶ್ರೀಕಾಂತನಿಗೆ ಆಯಿತು. ಅವು ಇನ್ನೂ ಸುಧಾರಿಸಿದ ದಿನಮಾನವಿರಲಿಲ್ಲ. ಲಗ್ನ ಎಂಟಾನೆಂಟು ದಿನ ನಡೆಯಲಿಲ್ಲ ನಿಜ ಯಾಕಂದರೆ ಮನೆ ಮನೆಯೊಳಗಿನ ಸಂಬಂಧ. ಆದರೆ ಕೊಡಕೊಳ್ಳುವಲ್ಲಿ ಕೊರತೆ ಆಗಲಿಲ್ಲ. ಊಟ ಉಪಚಾರ "ಗಡದ್ದು" ಆದವು. ಮದುವೆಯ ಮೆರವಣಿಗೆ ನ ಯಿತು. ಅದು ಕಾರಿನ ಪ್ರಾಬಲ್ಯದ ಕಾಲವಲ್ಲ ವಧೂವರರು ಸಾಲಂಕೃತ ಕುದುರೆಯ

ಸಿದ್ಧಗಂಗಾ

ೕಲೆ ಕುಳಿತು ದೇವಾಲಯಕ್ಕೆ ಹೋಗಿಬಂದರು ಅಷ್ಟೆ! ಎದುರಿಗೆ ಕಂಸೆ, ಬಜಂತ್ರಿ ದ್ದೇಇದ್ದವು. ಆ ನಿನಾದ ಅಪೂರ್ವವೇ!

ಶ್ರೀಕಾಂತನು ಏನು ಮರೆತರೂ ಮರೆತಾನು. ಆದರೆ ಮಧುಗಿರಿಯ ಹಲವು ಜಕ ವ್ಯಕ್ತಿಗಳನ್ನು ಮರೆಯುದಾಗಿದ್ದ. ಅವರಲ್ಲಿ ವಿನಾಯಕರಾಯರೊಬ್ಬರು ಅವ ನೊ ಈಗ ನಿವೃತ್ತ ಅಧಿಕಾರಿಗಳು. ಕೂತು ಉಂಡರೂ ಸವೆಯದಷ್ಟು ಆಸ್ತಿ ಇದೆ. ಯರು ಕಟ್ಟೆಯಮೇಲೆ ಕುಳಿತುಕೊಂಡರೆ ಮನೆಯ ಎದುರಿಗೆ ಹಾಯ್ದು ಶಾಲೆಯಿಂದ ರಳುವ ಶ್ರೀಕಾಂತನನ್ನು ಒದರುತ್ತಿದ್ದರು. ಆಗ ಅವರು ತಮ್ಮ ಹಿಂದಿನ ದಿನ ಾನದ ವೈಭವವನ್ನು ಅವನೆದುರು ಬಣ್ಣಿಸುತ್ತಿದ್ದರು. "ಹಳೆಯ ಹೆಗ್ಗಳಿಕೆ"ಯನ್ನು ಣ್ಣಿಸುವಲ್ಲಿ ಅವರು ಬಲ್ಲಿದರು. ತಾವು ಆಡಿದ ಫುಟ್‌ಬಾಲ್ ಆಟವನ್ನು ವರ್ಣಿಸುತ್ತ ಗಿನ ಜನ "ಲಾಪಾತ ಖೋಡಿಗಳು" ಎಂದು ಬಿರುದುಸಲ್ಲಿಸುತ್ತಿದ್ದರು. ಮಾಡಿದರೆ ಕೀಲಿ ಮಾಡಬೇಕು; ಉಳಿದ ವ್ಯವಸಾಯಗಳು "ಪುರಾಣಿ ಆರಿಸಿದಂತೆ" ಎಂದು ವರ ಅಭಿಪ್ರಾಯ. ಎಲ್ಲ ಹೇಳಿದ ನಂತರ–ತಮ್ಮ ಊಟದ ಪೌರುಷ ಕೊಚ್ಚಿಕೊಂಡ ಂತರ–ಶ್ರೀಕಾಂತನಿಗೂ ಅವರಿಗೂ ಅಡುಗೆಯ ಮನೆಯಿಂದ ಅವರ ಸೊಸೆ ಮಾಲತಿ ಾಯಿಯ ಕೈಯಿಂದ ತಿಂಡಿ-ತೀರ್ಥ ಬರುತ್ತಿದ್ದವು. ವೈಭವಶಾಲಿ ಉಪಹಾರ ಡೆಯುತ್ತಿತ್ತು. ರಾಯರ ಹೇಳಿಕೆಯ ಮೇರೆಗೆ ಅವರ ತಾರುಣ್ಯದ ಕಾಲದಲ್ಲಿ ುಂಡಿಯ ಜಿದ್ದಿನಲ್ಲಿ ಅವರನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ಬಡಿಸುವವರೇ ೀಸರಿಯುತ್ತಿದ್ದರು!

ವಿನಾಯಕರಾಯರ ಮನೆಯ ಮುಂದೆ ಹಾಯ್ದು ಪೇಟೆಗೆ ಹೋಗುವ ವ್ಯಕ್ತಿ ಂದರೆ ತ್ರಿವಿಕ್ರಮಾಚಾರ್ಯರು. ಅವರನ್ನು ದೂರಿನಿಂದ ಕಂಡಾಗಲೆ ವಿನಾಯಕ ಾಯರು "ದೇಭ" ಎಂದು ಒದರುತ್ತಿದ್ದರು. ಇದರ ಅರ್ಥ ಅವರು ದೇಶಭಕ್ತ ಎಂಬ ಡಂಬಣೆ, ಆಗಿನದು ಇನ್ನೂ ಬ್ರಿಟೀಶ್ ರಾಜಸತ್ತೆಯ ಗುಂಗಿನ ದಿನಮಾನ ಗಾಂಧೀ ಿಯ ಸ್ವಾತಂತ್ರ್ಯಾಂದೋಲನದ ಯೋಚನೆಯನ್ನೇ ಆಗ ಹಲವರು ಹೀಯಾಳಿಸು ್ತಿದ್ದರು--ರಾಜನಿಷ್ಠರು! ತ್ರಿವಿಕ್ರಮಚಾರ್ಯರು ಅಸಹಕಾರ ಚಳವಳಿಯಲ್ಲಿ ಧುಮುಕಿ ಮೂರು ತಿಂಗಳು ಜೇಲು ಕಂಡು ಬಂದದ್ದೇ ಹುಡುಗಾಟಿಕೆಗೆ ಕಾರಣ.

ಇರಲಿ ತ್ರಿವಿಕ್ರಮಾಚಾರ್ಯರು ಶ್ರೀಕಾಂತನ ಮನೆಯ ಪೂಜಾರರು. "ಬೆಳೆ ಯಲ್ಲಿ ಬೆಲ್ಲ ಬಿದ್ದ" ದಿನ ಆ ದಂಪತಿಗಳು ಮೋಹನರಾಯರಲ್ಲಿ ಊಟಕ್ಕೆ ಬರಲೇ ಬೇಕು. ಆ ಶುಚಿರ್ಭೂತ ಬ್ರಾಹ್ಮಣನಿಂದ ಮನೆಯಲ್ಲಿ ಪೂಜೆ ಪುನಸ್ಕಾರ ನಡೆಯು ್ತಿದ್ದವು. ತ್ರಿವಿಕ್ರಮಾಚಾರ್ಯರು ಮಹಾ ವಿನಯಶಾಲಿ, ಭಿಡಸ್ಥರು. ರಾಯರ ಮನೆಯಲ್ಲಿ ಸಾದಾ ಊಟವಾಗಿದ್ದರೂ ಬಂಗಾರದ ತಾಟಿನಲ್ಲಿ ಮಂಡಿಗಿ ಪ್ರಸ್ತವಾಯಿ ತೆಂದು ಹೊಗಳುತ್ತಿದ್ದರು. ಇಲ್ಲಿ "ಮುಖಸ್ತುತಿಯ" ಉದ್ದೇಶ ಇರುತ್ತಿರಲಿಲ್ಲ.

ಐದು ರೂಪಾಯಿ ದಕ್ಷಿಣೆ ಸಲ್ಲಿಸಿದ್ದರೆ, ರಾಯರು ಇಂದು ಒದು ಸಾವಿರ ರೂಪಾಯಿ ದಯಪಾಲಿಸಿದರೆಂದು ಘಾಣಾಡಂಗುರು ಸಾರುತ್ತಿದ್ದರು. ಜಾಣಾಕ್ಷ ಜನರು ಕುಚೇಷ್ಟೆ ಮಾಡುತ್ತಿದ್ದರು–ಆಚಾರ್ಯರನ್ನು ಕಂಡು.

ಆಚಾರ್ಯರು ಹಾಗೇ ಅತಿ ಅಭಿಮಾನಿಗಳು. ಕೊಂಚ ದುರಾಭಿಮಾನಿ ಅಂದರೂ ಚಿಂತೆ ಇಲ್ಲ! ಒಮ್ಮೆ ಒಳ್ಳೆಯ ಎಣ್ಣೆ ಡಬ್ಬಿಯನ್ನು ಒಯ್ಯುವಾಗ ಊರ ಮಾಮಲೇದಾರರು ಎದುರಿಗೆ ಬರಲು–ಆಚಾರ್ಯರು ಅವರಲ್ಲಿಯೂ ಪೂಜೆಗೆ ಹೋಗು ತ್ತಿದ್ದರು–ಕೈಯಲ್ಲಿಯ ಡಬ್ಬಿಯನ್ನು ಬಳಿಯಲ್ಲಿಯ ಗಟಾರದಲ್ಲಿ ಚೆಲ್ಲಿ ಕೈಮುಗಿದು ನಿಂತರು. ಮನೆಗೆಲಸ ಮಾಡಿದರೆ ದೊಡ್ಡಸ್ತಿಕೆಗೆ ಕುಂದು ಎಂಬ ಭಾವನೆ ಅವರದು. ಆದರೆ ಇವೆಲ್ಲ ಚಂದ್ರನಂತಹ ಅವರ ವರ್ಚಸ್ಸಿನಲ್ಲಿ ಒಂದು ಕಪ್ಪು ಕಲೆಯಷ್ಟೆ.!

ಶ್ರೀಕಾಂತನ ತಂದೆ ಮೋಹನರಾಯರು ಆಫೀಸಿನ ಕೆಲಸ ಮುಗಿದನಂತರ ಸಬ್ ರಿಜಿಸ್ಟ್ರಾರ ಬಳವಂತರಾಯರ ಮನೆಗೆ ಹೋಗಿ ಅಲ್ಲಿಯ ಚಹದ ನಂತರ "ಗಂಜೀಪು" ಆಟಕ್ಕೆ ಕುಳಿತುಕೊಳ್ಳುತ್ತಿದ್ದರು. ಅವರೂ ಮಹಾ ಆಸ್ತಿಕರು, ಪಗಾರದ ನಾಲ್ಕು ಪಟ್ಟು ಅವರಿಗೆ ನೌಕರಿಯಲ್ಲಿ ಮೇಲಿನ ಉತ್ಪನ್ನ ಪ್ರತಿ ತಿಂಗಳು. ಜುಲುಮೆಯ ವಿವಾಹಕ್ಕೆ ರೋಸಿ ರಾಯರು ಚೆಲುವೆ ಉಪ ಪತ್ನಿಯೊಡನೆ ಆಗೀಗ ಇರುತ್ತಿದ್ದದು ವಿಶೇಷ ಬಹಿರಂಗವಾಗಿರಲಿಲ್ಲ. ಆದ್ರೆ ಅವರ ರಸಿಕತೆ ಹೇಗೂ ಎದ್ದು ಕಾಣುತ್ತಿತ್ತು. ರಾಯರ ಸರಸ ಸಜ್ಜನಿಕೆಯಲ್ಲಿ ಇದ್ದಬಿದ್ದ ಚಿಲ್ಲರೆ ದೋಷಗಳು ಮರೆಮಾಚಿ ಹೋಗು ತ್ತಿದ್ದವು.

(ಮುಂದುವರಿಯುತ್ತದೆ)

---

# ಈಸಬೇಕು ಇದ್ದು ಜೈಸಬೇಕು.

—ಕೆ. ಎನ್. ಸ್ವಾಮಿ, ಎಂ. ಎ. ಬಿ. ಎಡ್.,
ಅಧ್ಯಾಪಕರು, ಸರ್ಕಾರಿ ಬಾಲಕರ ಪ್ರೌಢಶಾಲೆ, ದಾವಣಗೆರೆ.

ಈಸಬೇಕು ಇದ್ದು ಜೈಸಬೇಕು ಎಂಬ ಅಮೃತೋಪಮವಾದ ವಾಕ್ಯ ಪುರಂದರದಾಸರದು. ವ್ಯಕ್ತಿ ಶಕ್ತಿಯಾಗಬೇಕಾದರೆ, ಆತ್ಮ ಶಕ್ತಿ ಅತಿ ಅವಶ್ಯಕ. ತನ್ನ ಶಕ್ತಿಗೆ ತಾನೇ ಇತಿ ಮಿತಿ ಹಾಕಿ ಕೊಳ್ಳಬಾರದು. ದೇಹಬಲ ಹಾಗೂ ಬುದ್ಧಿ ಬಲದಿಂದ ಮುನ್ನುಗ್ಗಬೇಕು. ತನ್ನ ಗುರಿಯನ್ನು ಮುಟ್ಟಬೇಕು.

ಶ್ರಮವಿಲ್ಲದೆ ಫಲವಿಲ್ಲ. ಪ್ರತಿಯೊಂದು ಸತ್ಕಾರ್ಯದ ಹಿಂದೆ ಅಗೋಚರವಾದ ಶಕ್ತಿಯು ಕೆಲಸ ಮಾಡಿರುತ್ತದೆ. ಒಂದು ಬೃಹತ್ ಭವನ ನಿರ್ಮಾಣದ ಹಿಂದೆ ನೂರಾರು ಜನರು ಬೆವರು ಸುರಿಸಿರುತ್ತಾರೆ. ಸಾಗರದಲ್ಲಿ ಈಜಿ ರತ್ನವಿರುವ, ಮುತ್ತುಗಳಿರುವ ಸ್ಥಳದಲ್ಲಿ ಮುಳುಗಿದರೆ ಮಾತ್ರ ಅವನ ಶ್ರಮ ಸಾರ್ಥಕವಾಗುತ್ತದೆ. ಸತ್ಕಾರ್ಯಕ್ಕೆ ತನ್ನ ತನುಮನಗಳನ್ನು ಅರ್ಪಿಸಿದರೆ ಫಲ ಖಂಡಿತ ಲಭ್ಯವಾಗುತ್ತದೆ.

ಭಗವಂತನು ಸರ್ವರಿಗೂ ಸಮಾನ ಶಕ್ತಿಯನ್ನು ನೀಡಿರುತ್ತಾನೆ. ಕೆಲವರು ಆಶಕ್ತಿಯನ್ನು ಸಾರ್ಥಕ ಪಡಿಸಿಕೊಳ್ಳುತ್ತಾರೆ. ಗುರಿ ಮುಟ್ಟುವವರಿಗೂ ಹೋರಾಡುತ್ತಾರೆ, ಜಯಗಳಿಸುತ್ತಾರೆ ಮನೋಧಾರ್ಢ್ಯವಿಲ್ಲದವರು ಆರಂಭ ಶೂರತ್ವ ತೋರಿಸಿ ಹಿಡಿದ ಕೆಲಸವನ್ನು ಎಲ್ಲಿಗೆಂದರೆ ಅಲ್ಲಿಗೆ ಕೈಬಿಡುತ್ತಾರೆ. ಪೂರ್ವಾಪರ ವಿಚಾರ ಮಾಡುವುದಿಲ್ಲ.

ತೇನಸಿಂಗನು ಹಿಮಾಲಯ ಹತ್ತಲು ಪಟ್ಟ ಶ್ರಮ, ಹೋರಾಟವನ್ನು ಓದುತ್ತಿದ್ದರೆ, ರೋಮಾಂಚನವಾಗುತ್ತದೆ, ಮನ ನಡುಗುತ್ತದೆ. ಹೆಜ್ಜೆ ಹೆಜ್ಜೆಗೂ ಮೃತ್ಯುವಿನೊಂದಿಗೆ ಸೆಣಸಾಡುತ್ತಾನೆ. ತನ್ನ ಮನಕ್ಕೆ ತಾನೇ ಸಮಾಧಾನ ಹೇಳುತ್ತಾನೆ. "ತಜಿಛೆ ಚೋಮೋಲುಂಗ್ಮಾ" ಎಂದು ಮುಂದೆ ಸಾಗುತ್ತಾನೆ. ಅಪಾರ ಜನ ಧನವಿದ್ದರೂ ಅನಿರೀಕ್ಷಿತ ಘಟನೆಗಳು ಎದುರಾಗಿ, ಸ್ಫೂರ್ತಿಗೆ ತಣ್ಣೀರೆರಚುತ್ತವೆ. ಆದರೆ ಗಟ್ಟಿ ಮನಸ್ಸಿನ ತೇನಸಿಂಗ್ ಅಂಜದೆ ಅಳುಕದೆ ಬಂದ ಬವಣೆಗಳನ್ನು ದೂರ ಮಾಡುತ್ತಾ ಹಿಮಾಲಯದ ತುಟ್ಟತುದಿಗೇರಿ ಬಾವುಟ ಹಾರಿಸುತ್ತಾನೆ. ಜಗತ್ತಿನ ಗೌರವಕ್ಕೆ ಪಾತ್ರನಾಗಿದ್ದಾನೆ. ಜೀವನವನ್ನು ಸಾರ್ಥಕಪಡಿಸಿಕೊಳ್ಳುತ್ತಾನೆ.

ಸಿಕಂದರನಿಗೆ ಜಗತ್ತನ್ನೇ ಗೆಲ್ಲಬೇಕೆಂಬ ಆಸೆ ಇದ್ದಿತಂತೆ . ಇದಕ್ಕಾಗಿ ಅವನು

ಪಟ್ಟ ಶ್ರಮವನ್ನು ವಿವರಿಸಲು ಸಾಧ್ಯವಿಲ್ಲ. ಈ ಪ್ರಯತ್ನದಲ್ಲಿ ಕೆಲವು ಸಲ ಜಯ ಗಳಿಸಿದರೂ, ಅವನ ಆಸೆ ಸಂಪೂರ್ಣ ಈಡೇರಲಿಲ್ಲ. ಪ್ರಯತ್ನ ನಮ್ಮದು, ಫಲಾ ಫಲಗಳು ಭಗವಂತನದು.

ಇಂದು ಪ್ರತಿಯೊಂದು ಕ್ಷೇತ್ರದಲ್ಲೂ ಸ್ಪರ್ಧೆಯನ್ನು ಕಾಣುತ್ತಿದ್ದೇವೆ. ಕೈಗಾರಿಕೆ, ವ್ಯಾಪಾರ, ವಿದ್ಯಾಭ್ಯಾಸ ಮೊದಲಾದುವುಗಳಲ್ಲಿ ಪೈಪೋಟಿ ಹೆಚ್ಚುತ್ತಿದೆ. ಉದ್ಯಮಗಳನ್ನು ನಷ್ಟದಿಂದ ನಡೆಸಿಕೊಂಡು ಹೋಗಬೇಕಾಗುವ ಸಂದರ್ಭಗಳು ತಲೆದೋರಬಹುದು. ಇಂತಹ ಪರಿಸ್ಥಿತಿಯಲ್ಲಿ ಪ್ರಾಮಾಣಿಕವಾದ ಶ್ರದ್ಧೆಯಿಂದ ದುಡಿಯಬೇಕಾಗುತ್ತದೆ. "ಧೈರ್ಯಂ ಸರ್ವತ್ರ ಸಾಧನಂ" ಎಂಬುದನ್ನು ನೆನಪಿನಲ್ಲಿ ಇಟ್ಟುಕೊಂಡು ಮುಂದೆ ಸಾಗಬೇಕು.

ಪ್ರತಿಯೊಂದು ಕಾರ್ಯದ ಹಿಂದೆ ವ್ಯವಸ್ಥಿತವಾದ ಶಕ್ತಿಯ ಕೈವಾಡವಿರುತ್ತದೆ. ಯೋಜನಾ ಬದ್ಧವಾಗಿ ಕಾರ್ಯವನ್ನು ಪ್ರಾರಂಭಿಸಿ, ಹಂತ ಹಂತವಾಗಿ ಮುಗಿಸುತ್ತಾ ಹೋಗಬೇಕು. ಇಂದಿನ ಯುಗದಲ್ಲಿ ಕೈಕಟ್ಟಿ ಕುಳಿತ ವ್ಯಕ್ತಿ ಸರ್ವನಾಶವಾಗುತ್ತಾನೆ ಪಾತಾಳಕ್ಕೆ ತುಳಿಯಲ್ಪಡುತ್ತಾನೆ. ಸ್ವಶ್ರಮದಿಂದ ಮುಂದೆ ಸಾಗಬೇಕಾಗುತ್ತದೆ.

ಸಮಸ್ಯೆಗಳ ಸುಳಿಗೆ ಸಿಕ್ಕಿದಾಗ ಹೆದರಿ ಕುಳಿತರೆ ಸರ್ವನಾಶವಾಗುತ್ತದೆ. ವ್ಯಕ್ತಿತ್ವವೇ ಕಮರುತ್ತದೆ- ಬಾಳು ಶೂನ್ಯವಾಗುತ್ತದೆ, ಇಂತಹ ಸಂದರ್ಭಗಳಲ್ಲಿ ಆಪ್ತರ, ಹಿತೈಷಿಗಳ ಬಂಧು-ಬಾಂಧವರ ಸಹಾಯ ಸಹಕಾರಗಳಿಂದ ಮುನ್ನುಗ್ಗಿ ಜಯಗಳಿಸಬೇಕಾಗುತ್ತದೆ.

ವ್ಯಾಪಾರದಲ್ಲಿ ಒಮ್ಮೆ ನಷ್ಟವಾಯಿತೆಂದು ವ್ಯಾಪಾರವನ್ನೇ ಬಿಡುವವರಿದ್ದಾರೆ. ಒಮ್ಮೆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೆ ಶಾಲಾ ಕಾಲೇಜುಗಳನ್ನೇ ಬಿಡುವವರಿದ್ದಾರೆ, ಸಂಸಾರದಲ್ಲಿ ಒಮ್ಮೆ ಉಂಟಾದ ಜಗಳಕ್ಕಾಗಿ ಪ್ರಾಣಾರ್ಪಣೆಗೆ ಸಿದ್ಧರಾದವರೂ ಇದ್ದಾರೆ. ಹೀಗೆ ಪ್ರತಿ ಸಂದರ್ಭದಲ್ಲೂ ತಿಳಿದವರೂ ತಿಳಿಯದವರೂ ಮುಗ್ಗರಿಸುವುದುಂಟು. ಇಂತಹ ಸಮಯಗಳಲ್ಲಿ ತಾಳ್ಮೆ ಅತಿ ಅವಶ್ಯಕ. ರಾಷ್ಟ್ರಕವಿ ಶ್ರೀ ಕುವೆಂಪುರವರು "ತಾಳ್ಮೆಯೊಳು ಬಾಳ್ಮೆ ಇದೆ" ಎನ್ನುತ್ತಾರೆ.

ಎಂತಹ ಸಂದರ್ಭಗಳಲ್ಲೂ ಪಲಾಯನ ವಾದಕ್ಕೆ ಅಡಿಯಾಳಾಗಬಾರದು. ಪರಿಸ್ಥಿತಿಯನ್ನು ಗಂಭೀರವಾಗಿ ಯೋಚಿಸಿ ಅರ್ಥಮಾಡಿಕೊಂಡು, ಇತಿ ಮಿತಿಯಾಗಿ ಮುಂದೆ ಸಾಗಿದರೆ ಜಯ ಕಟ್ಟಿಟ್ಟ ಬುತ್ತಿ. ಕಷ್ಟ ಸುಖಗಳ ಸಂಗಮವೇ ಜೀವನ. ಕಷ್ಟಕ್ಕೆ ಕುಗ್ಗದೆ ಸುಖಕ್ಕೆ ಹಿಗ್ಗದೆ, ಸಮಚಿತ್ತವನ್ನು ಬೆಳೆಸಿಕೊಂಡು ಪ್ರತಿಯೊಬ್ಬರೂ ಸಾಗಿದರೆ ಜೀವನ ಅಮೃತಮಯವಾಗುತ್ತದೆ. ನೆಮ್ಮದಿಯ ಬೀಡಾಗುತ್ತದೆ. ●

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ತೆರಿಂದಾಳು, ಗೌರಿಬಿದನೂರು ತಾಲ್ಲೂಕು ಬೇಸಾಯಗಾರರ ಗ್ರಾಮ. ಎರಡ
ಯ ಬಾರಿ ಅಲ್ಲಿ ಬಸವ ಜಯಂತಿ ಆಚರಣೆ 24-3-1985 ಭಾನುವಾರ. ಊರಿಗೆ
ಊರೇ ಮಿಂದು ಮಡಿಯಾಗಿ, ತಳಿರು ತೋರಣ ಕಟ್ಟಿ, ವಾದ್ಯ ವೈಭವದೊಂದಿಗೆ
ಸ್ವಾಗತಿಸಿತು. ಭಕ್ತಿ ಶ್ರದ್ಧೆಗಳಿಂದ ಪರಮ ಪೂಜ್ಯ ಶ್ರೀ ಶ್ರೀಗಳವರನ್ನು. ಬಸವ ತತ್ವ
ಳಿಗೆ ಮಾರುಹೋದ ಗ್ರಾಮ ತರಿಂದಾಳು.

ಸಮಾರಂಭದಲ್ಲಿ ಮುಖ್ಯ ಉಪನ್ಯಾಸಕರಾಗಿ ಶ್ರೀ ಬಿ. ವೀರಭದ್ರಯ್ಯನವರು
ಾತನಾಡುತ್ತ ಬದುಕಿನಲ್ಲಿ ಮಹಾ ಪರಿವರ್ತನೆ ಆಗಬೇಕಾದ ಕಾಲ ಸನ್ನಿಹಿತವಾಗಿದೆ.
ರಮ ಪೂಜ್ಯ ಶ್ರೀ ಶ್ರೀಗಳವರು ಬಸವ ಜಯಂತಿಯನ್ನು ಅಖಂಡವಾಗಿ ವರ್ಷವಿಡೀ
ಡೆಸಿಕೊಂಡು ಬರುತ್ತಿದ್ದಾರೆ. ಕನ್ನಡನಾಡಿನಲ್ಲಿರುವಷ್ಟು ದೈವ ಸಾಕ್ಷಾತ್ಕಾರ ಪುರು
ರು ಅನ್ಯ ನಾಡಿನಲ್ಲಿ ಕಾಣುತ್ತಿಲ್ಲ. ಲೋಕಪಾವನಮೂರ್ತಿ ಬಸವಣ್ಣ ಜಗತ್ತಿನ
ಪುಣ್ಯಪುರುಷರ ಶ್ರೇಣಿಯಲ್ಲಿ ಅಗ್ರಗಣ್ಯ. ಪಾಪ ಮಾಡಿದವನಿಗೂ ಪ್ರಾಯಶ್ಚಿತ್ತದ
ಾದಿಯ ಮುಖೇನ ಉದ್ಧಾರದ ಗದ್ದುಗೆಯನ್ನು ತೋರಿದ ಪೂಜ್ಯ ಬಸವಣ್ಣ. ಆತ್ಮ
ಶ್ವಾಸದ ಅಖಂಡ ಜೀವನ ಆ ಮಹಾನುಭಾವ "ಕೊಲುವೆನೆಂಬ ಭಾಷೆ ದೇವನದು ;
ಲುವೆನೆಂಬ ಭಾಷೆ ಭಕ್ತನದು"-ಎಂದೇ ಅವನ ಭಕ್ತಿ ಶುಭಾಶಯ ಎಂದರು.

ನೂರಾರು ಜಾತಿಗಳನ್ನು ಇಲ್ಲವಾಗಿಸಿದರು ಶರಣರು. ಕೇವಲ ಎರಡು ಜಾತಿ
ಯನ್ನು ಗುರುತಿಸಿದರು—ಸದಾಚಾರ ದುರಾಚಾರಗಳ ಆಧಾರದ ಮೇಲೆ ಅಂಥವರನ್ನು
ಭಕ್ತ-ಭವಿಗಳೆಂದು ಪರಿಭಾಷಿಸಿದರು. ಎಲ್ಲ ಧರ್ಮಗಳ ಗುರಿ ಲೋಕಕಲ್ಯಾಣ,
ಧರ್ಮರಾಹಿತ್ಯ ಬದುಕು ಸಮಾಜದಲ್ಲಿರಲು ಸಾಧ್ಯವಿಲ್ಲ. ಪ್ರಾತಃ ಸ್ಮರಣೀಯರಾದ
ಶರಣರು ಮುಗ್ಧ ಜನಗಳನ್ನು ಬುದ್ಧಿಜೀವಿಗಳು, ಪುರೋಹಿತವರ್ಗ ಶೋಷಣೆ ಮಾಡುವು
ದನ್ನು ಪ್ರತಿಭಟಿಸಿದರು. "ಕೊಲ್ಲುವವನೆ ಮಾದಿಗ, ಹೊಲಸು ತಿಂಬುವವನೆ
ಹೊಲೆಯ"-ಎಂದು ನಿರ್ಭೀತರಾಗಿ ನುಡಿದಕೆಚ್ಚು, ಅಸೀಮ ಧೈರ್ಯ ಶರಣರದ್ದು.
ಜಗತ್ತಿಗೆ ಆದರ್ಶ ಜೀವನವನ್ನು ತೋರಿಸಿಕೊಟ್ಟ ಶರಣರು ಸಮಗ್ರ ದೃಷ್ಟಿಯುಳ್ಳವರು.
ಬದುಕನ್ನು ಅರ್ಥಪೂರ್ಣವನ್ನಾಗಿಸಿದ ಕೀರ್ತಿ ಅವರದು. 'ನಾರಿ ನರಕಕ್ಕೆ ದಾರಿ' ;
The root of evil, she has no soul ಎಂಬ ಮಾತುಗಳೆಲ್ಲವನ್ನೂ
ಸಂಪೂರ್ಣವಾಗಿ ನಿರಾಕರಿಸಿದರು. ಸ್ತ್ರೀಯನ್ನು "ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ"

ನೆಂದು ಗೌರವಿಸಿದರು. ಅವರದು ಪರಿಪೂರ್ಣದೆಡೆಗೆ ನಡೆವ ಪೂರ್ಣ ದೃಷ್ಟಿ, ಅದನ್ನು ಇಂದಿನ ವೈಜ್ಞಾನಿಕ ಯುಗ ಅರಿತಷ್ಟೂ ಒಳ್ಳೆಯದು–ಎಂಬುದಾಗಿ ಶ್ರೀ ಎಸ್. ಎಂ. ಭಾಸ್ಕರಾಚಾರ್ ಉಪನ್ಯಾಸ ಮಾಡಿದರು.

"ಇವನಾರವ, ಇವನಾರವ, ಇವನಾರವನೆಂದಿನಿಸದಿರಯ್ಯಾ" ಇವ ಮಾದಿಗ, ಇವ ಹೊಲೆಯ, ಇವ ಕುಂಬಾರ, ಇವ ಚಮ್ಮಾರ, ಇವ ಮಡಿವಾಳ, ಇವ ಹಡಪಿಗ, ಇವ ಗಾಣಿಗ, ಇವ ಒಕ್ಕಲಿಗ, ಇವ ಶೆಟ್ಟಿ, ಇವ ಬಣಜಿಗ, ಇವ ಸಾದ, ಇವ ನೊಣಬ, ಇವ ಗೌಡ, ಇವ ಮೇದರ, ಇವ ದೋಹರ ಮುಂತಾಗಿ ಸಮಾಜವೇ ಒಡೆದು ಮಡಕೆಯ ಚೂರಿನಂತಾಗುತ್ತಿದ್ದುದನ್ನು ಕಂಡು ಮರಮರನೆ ಮರುಗಿದ ಬಸವಣ್ಣನವರು–"ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ" ಎಂಬುದಾಗಿ ಸಕಲ ಜೀವರನ್ನೂ, ಶುದ್ಧ ಸಂಸ್ಕಾರ ಜೀವಿಗಳನ್ನೂ ಬಾಚಿ ಎದೆಗೆ ತಬ್ಬಿಕೊಂಡ ಮಹಾ ಮಾನವತಾವಾದಿ ಎಂಬುದಾಗಿ ನುಡಿದರು ದೊಡ್ಡಸಾರಂಗಿ ಶ್ರೀ ಮೃತ್ಯುಂಜಯಪ್ಪನವರು.

ಜನಪದರು ಮುತ್ತು ಮಾಣಿಕ್ಯವನ್ನು ಬೇಡಿದವರಲ್ಲ, ವೈಭವಕ್ಕೆ ಬಾಯಿಬಿಟ್ಟವರಲ್ಲ, ಸುತ್ತುಕೋಟೆಯ ಸಂಪತ್ತಿಗೆ ಕೈ ಚಾಚಿದವರಲ್ಲ, ಸುತ್ತೆಲ್ಲ ಜನಪದ ನಗುತಿರಲಿ ಎಂದು ಹಾರೈಸಿದವರು. ಅಂಥ ಜನಪದರ ಬದುಕಿನುದ್ಧಾರಕ್ಕೆ ಹೋರಾಡಿದ, ಪದವಿ ತ್ಯಾಗಮಾಡಿದ ಬಸವಣ್ಣನವರನ್ನೂ ಹೃದಯ ತುಂಬಿ ಹಾಡಿದರು. ಬಸವಣ್ಣನವರ ಬಗ್ಗೆ, ಶರಣರ ಬಗ್ಗೆ ಕನ್ನಡ ಜನಪದದಲ್ಲಿ ಸಿಕ್ಕುವಷ್ಟು ಸಾಹಿತ್ಯ ಸಂಪತ್ತು ಬೇರೆ ಆಚಾರ್ಯರ ಬಗ್ಗೆ, ಸಂತರ ಬಗ್ಗೆ ಇಂದು ಸಿಕ್ಕುವುದಿಲ್ಲ. ಸದಾ ಸಕಲ ಜೀವಂಗೆ ಲೇಸನೆ ಬಯಸಿದ ಬಸವಣ್ಣನವರ ವಚನಗಳು ಮಾಡಿರುವ ಸುಧಾರಣೆ ಜನಪದರ ಹಾಡುಗಳಲ್ಲಿ ಹಾಗೆ ಹಾಗೆಯೇ ವ್ಯಕ್ತವಾಗಿವೆ. ಕಾಯಕ, ದಾಸೋಹ, ಗುರು-ಲಿಂಗ ಜಂಗಮ ಭಕ್ತಿ, ಎಲ್ಲಕ್ಕೂ ಮಿಗಿಲಾಗಿ ಅಸ್ಪೃಶ್ಯರ ಉದ್ಧಾರ, ಇವುಗಳೆಲ್ಲ ಜನಪದ ಮುಕ್ತಕಗಳಾಗಿ ಅರಳಿವೆ. ಅವುಗಳಲ್ಲಿ ಕೃತಕತೆಯ ಸೋಂಕಿಲ್ಲ, ಪಾಂಡಿತ್ಯದ ಕ್ಲೇಶವಿಲ್ಲ, ಹೂವು ಅರಳಿದಂತೆ ಅರಳಿವೆ–ಎಂದರು ಹೆಚ್. ವಿ. ವೀರಭದ್ರಯ್ಯ ಅವರು.

ಕೇವಲ ವೀರಶೈವರಿಗೆ ಮಾತ್ರ ಸೀಮಿತನಾದ ವ್ಯಕ್ತಿಯಲ್ಲ ಬಸವಣ್ಣ. ಆತ ವಿಶ್ವಬಂಧು; ವಿಶ್ವ ಮಾನವ. ಇಹದ ಬದುಕು ಸುಂದರವಾಗಬೇಕೆನ್ನುವುದಾದರೆ ಬಸವ ಪಥವೊಂದೇ ಸಾಧನ. ಬಸವಣ್ಣನವರ ಸಂದೇಶವನ್ನು ಅನುಸರಿಸುವುದರಿಂದ ನೆಮ್ಮದಿಯ ಬಾಳು, ಸಮೃದ್ಧ ಜೀವನ, ಸ್ವಾವಲಂಬಿತ ಬದುಕು ನಮ್ಮದಾಗುತ್ತದೆ. ಜಗತ್ತಿನ ಜೀವನವನ್ನು ಅರ್ಥಪೂರ್ಣವಾಗಿಸುವ ಸಂದೇಶ ಬಸವಣ್ಣನವರದು. ಅವರ ಮಾತುಗಳಲ್ಲಿ ದೈನ್ಯತೆಗೆ, ಹೇಡಿತನಕ್ಕೆ, ಗೊಂದಲಕ್ಕೆ ಅವಕಾಶವಿಲ್ಲ ಪ್ರತಿಯಾಗಿ ಅಭಿಮಾನಕ್ಕೆ, ಆತ್ಮವಿಶ್ವಾಸಕ್ಕೆ; ನೇರನಿಚ್ಚಳ ಬದುಕಿಗೆ ಎಡೆದೊರೆತಿದೆ. ಬದುಕು

ಕೂತು ಊಟ ಮಾಡಿದರೆ ಅರ್ಥವಾಗುವುದಿಲ್ಲ. ದೇವತೆಗಳಾದರೂ ಬದುಕಿನ ಸಿದ್ಧಿಗಾಗಿ ಭೋಗಭೂಮಿಯ ಭೋಗತನವನ್ನು ಬಿಟ್ಟು ಕರ್ಮೋದ್ಯೋಗ ಭೂಮಿಯಾದ ಮರ್ತ್ಯಕ್ಕೆ ಅವತರಿಸಿದಾಗಲೇ ಲಭ್ಯ. ಮಾನವ ಜೀವನದ ಸೌಂದರ್ಯವನ್ನು ಕಂಡುಂಡ ಶರಣರು ಜಗತ್ತಿಗೇ ದಾರಿ ತೋರಿದ್ದಾರೆ. ಇಂದು ಎಲ್ಲೆಲ್ಲೂ ಕೇಳಿಬರುತ್ತಿರುವ ಮಿತ ಸಂತಾನ ಯೋಜನೆಯೊಂದೇ ರಾಷ್ಟ್ರ ಕಲ್ಯಾಣಕ್ಕೆ ಕಾರಣವಲ್ಲ, ಕಾಯಕ ತತ್ವವನ್ನ ...ತು, ಧರ್ಮದ ಬುನಾದಿಯ ಮೇಲೆ ನವರಾಷ್ಟ್ರ ನಿರ್ಮಾಣವಾಗಬೇಕು, ಧರ್ಮಕ್ಕೆ ಅಗ್ರಸ್ಥಾನಕೊಟ್ಟವರು ಬಸವಣ್ಣ. ಕ್ರಿಯಾಶಕ್ತಿ, ವಾಕ್‌ಶಕ್ತಿ, ವಿಚಾರ ಶಕ್ತಿಗಳ ತ್ರಿಪುಟಿಯಾದ ಮಾನವ ಒಂದು ಹುಳುವಾಗಬಾರದು; ಒಂದು ಜಂತುವಾಗಬಾರದು; ಒಂದು ಪಶುವಾಗಬಾರದು, ಮಂಗಳ ಮೂರ್ತಿಯಾಗಬೇಕು ಎಂಬುದನ್ನು ಬಸವಣ್ಣ ಬೋಧಿಸಿದ್ದಾರೆ. ಅವರು ಬರೀ ಧರ್ಮ ಗುರುವಾಗಿರಲಿಲ್ಲ, ಆತನೊಬ್ಬ Perfect economist ಕೂಡ. ಅಷ್ಟೇ ಏಕೆ Social reformer ದೂರದೃಷ್ಟಿಯ ದಾರ್ಶನಿಕ, ಬಸವಣ್ಣನವರು ಪ್ರತಿಪಾದಿಸಿದ ಕಾಯಕ ಮತ್ತು ದಾಸೋಹ ತತ್ವಗಳಿಂದು Production and Distribution ವ್ಯವಸ್ಥೆಗೆ ಆಣಿ ಮುತ್ತಿನಂಥ ಮಾದರಿ– ...ಕಂತಿಸಿದಷ್ಟೂ ಅರ್ಥ ಪರಂಪರೆಯನ್ನು ಅದು ತೆರೆಯುತ್ತ ಹೋಗುತ್ತದೆ. ಅಂಥ ...ಬೊಂದು ಪರ್ಯಾಯ ವ್ಯವಸ್ಥೆಯನ್ನು ಇನ್ನು ಜಗತ್ತು ಕಾಣಲಿಕ್ಕಿಲ್ಲ. ಕಾರ್ಲ್ ಮಾರ್ಕ್ಸ್‌ನ ವಾದಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾದ, ಜಗತ್ತಿನ ಬದುಕನ್ನೇ ...ವ್ಯವಾಗಿಸುವಂಥ, ಮಂಗಳಕರವಾಗಿಸುವಂಥ ವ್ಯವಸ್ಥೆ ಅದು. ಬಸವಣ್ಣ ಕೇವಲ ...ವಯೋಗವನ್ನು, ವೀರಶೈವರ ಅಷ್ಟಾವರಣಗಳನ್ನು, ಮಾತ್ರ ಬೋಧಿಸಿದ ಆಚಾರ್ಯ ...ಲ್ಲ; ಮಾನವನ ಬದುಕಿನ ಪೂರ್ಣತೆಯನ್ನು ಅರಸಿದ, ಗುರುತಿಸಿದ, ಅನುಸರಿಸಲು ಯೋಗ್ಯವಾದ ತತ್ವಗಳನ್ನು ನೀಡಿದ ಮಹಾನುಭಾವ ಎಂಬುದಾಗಿ ಪರಮ ಪೂಜ್ಯ ...ೀ ಶ್ರೀಗಳವರು ದಿವ್ಯಾನುಗ್ರಹ ಮಾಡಿದರು.

ಜಗಜ್ಯೋತಿ ಬಸವೇಶ್ವರ ನಾಟಕ ರಾತ್ರಿ ಹತ್ತು ಘಂಟೆಯಿಂದ ಬೆಳಗಿನ ...ಾವ ಐದು ಘಂಟೆಯವರೆಗೆ ನಡೆಯಿತು. ತರಿದಾಳು ಕಂಡಿರದಷ್ಟು ಜನಸ್ತೋಮ ...ಾಟಕದ ನೆಪದಲ್ಲಿ ಕಾಣುವಂತಾಯಿತು. ಸುಮಾರು ಇಪ್ಪತ್ತು ಸಾವಿರ ಜನ ಸೇರಿ ...ರು. 'ನಾಟಕ ತುಂಬಾ ಬದಲಾಗಿದೆ' ಎಂದುಕೊಂಡವರು ಬಹಳ ಜನ. ನಾಟ...ಕ್ಕೆ ಬಂದಿದ್ದ ಪಕೋಡದಂಗಡಿಗಳಲ್ಲಿ ಒಂದು ಚೂರೂ ಉಳಿದಿರಲಿಲ್ಲ. ಏನು ...ಬ್ಬಂದಿ? ಏನು ವ್ಯವಸ್ಥೆ? ಲೈಟು ನಿಂತಾಕ್ಷಣವೇ ಜನರೇಟರ್ ವ್ಯವಸ್ಥೆ ಕೂಡಾ ...ದೆಯಲ್ಲಾ? ಯಾರಿಂದ ಸಾಧ್ಯವಪ್ಪ ಇಷ್ಟೊಂದು ಸಿದ್ಧತೆ? ಎಂದು ಆರೂಢಿ ...ರಿಯರೊಬ್ಬರು ಹೇಳಿದ್ದಕ್ಕೆ "ಸ್ವಾಮಿಗಳ ಸೇವೆಗೆ ಮೈಯೆಲ್ಲಾ ಕಾಲು ಹರಿವ ನದಿ ...ಂತೆ" ಎಂದ ಅಲ್ಲಿನವನೇ ಆದ ಈ ವರದಿಗಾರನ ವಿದ್ಯಾರ್ಥಿಯೊಬ್ಬ.

LICENCED TO POSTWITHOUT PRE PAYMENT LICENCE NO.
SIDDAGANGA MONTHLY Reg No. KRN Q-



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.